**ನಾಟಕಪಣ್ಡಿತ nāṭaka-paṇḍita.** a man skilful at plays, a doctor of dramaturgy (Bp. 59, 27).

**ನಾಟಕಶಾಲೆ nāṭaka-śāle.** a play-house, a hall for dramatic exhibitions, a theatre, etc. (My.).

**ನಾಟಿ nāṭi.** = ನಟ್ಟಿ 2, ನೇಜಿ. young plants, especially of rice, fit for transplanting (My.; Tu.; Te. ನಾಱು; T. ನಾಱು, ನಾಱ್ಜು; M. ಞಾಱು, T., M. ನಾಱು, to grow up, shoot np, arise, come into existence, see s. ನನೆ 4). ನಾಟಿ ಹಾಕು (My.). 2, the act of planting or transplanting (My.; M. ನಾಟ್ಟು, ನಾಟ್ಟಿ). ನಾಟಿಯಾಯಿತೋ? or ನಾಟಿ ಮುಗಿಯಿತೋ? (My.).

**ನಾಟಿ nāṭi.** a kind of rāga (My.). — ನಾಟಿರಾಗ. = ನಾಟಿ. ನಾಟಿರಾಗ ನಾವರೂ ಪಾಠವಿಲ್ಲದೆ ಬಾರದು (Prv.).

**ನಾಟಿಕೆ nāṭike.** the act of planting.

**ನಾಟಿಕೆ nāṭike.** a short or light comedy, one of the drāmas of the second order.

**ನಾಟಿಸು nāṭisu.** to cause to enter; to make plant (My.).

**ನಾಟು nāṭu. 1.** = ನಡು 2, etc., ನಾಣ್ಟು. to get within, to enter; to be pierced or stuck into, as a thorn, etc. (ನಸು, ನಡು Ct. I, 7; Cpr. 3, 42; 5, 120; Rām. 3, 7, 22; My.). 2, to fix in the ground, to plant; to pierce into (My.; Tu.; Te. T., M. ನಾಟ್ಟು) ಗಣ್ಡಿಕದ ತೊಗಲಿನಲ್ಲಿ ಕಡತವೂ ಗುಣ್ಡೂ ನಾಟುವದಿಲ್ಲ (B. 4, 47). ಊಟ ಬೇಡವೆನ್ನು, ನಾಟಲಿಕ್ಕೆ ಹೋದ.—ನಾಟುವ ಅಣ್ಣುಗಳು ನಾಲ್ಕೆಣ್ಟು ದಿವಸದಲ್ಲೆ ನೆಲೆಗೊಮ್ಬುವವು (Prvs.). ದೃಷ್ಟಿ ನಾಟಲು (Bp. 35, 23). (ಅಂಗನೆಯರ) ನೋಟದಲಿ ಮದನಾಸ್ತ್ರಮ್ ಎದೆಯಲಿ ನಾಟಿದವು ವಿಟರುಗಳ,... ನಾಟ ಬಗದವು ವೀರಕಲೆ ನಗೆ ನಾಟದ ಉನ್ನ ಪವಿರಹಿಗಳ (Rām. 1, 14, 24). see Prv. s. ನೀರು.

**ನಾಟು nāṭu. 2.** = ನಾ 4. the state of having (deeply) entered, etc.; deepness, depth. (ನಾಟಾಗಿ ತೋಡು (My.). 2, planting. — ನಾಟುಕೋಲು. a stick that is used for making holes to put young plants in (My.). — ನಾಟು ಬೀಱು. a hole to be formed, as in a tree, the ground, etc. (My.).

**ನಾಟೇರ nāṭēra.** *the son of an actress or dancing girl.*

**ನಾಟ್ಯ nāṭya.** *dancing, mimic or dramatic representation, a play* (ನೃತ್ಯ, ತಾಣ್ಡವ, ಲಾಸ್ಯ Mr. 79; ರೂಪಕ 526); *the union of song, pantomime dance and instrumental music.* 2, an actor, a mime. ನಾಟ್ಯದಲ್ಲಿ ಶ್ರೇಷ್ಠನಾದರೆ ಆಟದಲ್ಲೇ ಆದೀತು (Prv.). ನಾಟ್ಯದ ಗರುಡಿ (Bh. 4, 4, 77), — ನಾಟ್ಯನವಿತ್ತಡಿ. N. (Bp. 17 sum.). — ನಾಟ್ಯನವಿತ್ತಡಿಯಯ್ಯಾರ್. N. (Bp. 9, 44).

**ನಾಟ್ಯಗಾತಿ nāṭya-gāti.** an actress, a dancing girl (ನರ್ತಕಿ, etc. Si. 63; My.).

**ನಾಟ್ಯಗಾಱ nāṭya-gāṟa.** an actor, a dancer (My.).

**ನಾಟ್ಯನಿಲಯ nāṭya-nilaya.** = ನಾಟ್ಯಮನ್ದಿರ. (Bh. 4, 4, 79).

**ನಾಟ್ಯಮನ್ದಿರ nāṭya-mandira.** a place where dancing is taught (Bh. 4, 4, 71); a theatre.

**ನಾಟ್ಯರಂಗ nāṭya-raṅga.** any place for dancing or dramatic exhibitions (My.). ನಾಟ್ಯರಂಗಕ್ಕೆ ಹೋಗಿ, ಊಟಾ ಅಪೇಕ್ಷಿಸಿದ ಹಾಗೆ (Prv.).

**ನಾಟ್ಯೋಕ್ತಿ nāṭya-ukti.** *dramatic phraseology, theatrical language.*

**ನಾಡ nāḍa.** = ನಾಲ. (Sk.). a hollow or tubular state, etc.

**ನಾಡದು nāḍadu.** = ನಾಡಿದು, ನಾಡಿದ್ದು, ನಾಳಿದ್ದು, ನಾಳಿರ್ದು. the day after to-morrow (My.; B. 1, 7; T. ನಾಳೆನಿಕ್ಕ್; Te. ಎಲ್ಲುಣ್ಡಿ; Tu. ಎಲ್ಲಂಜಿ. see ನಾಳೆ).

*ನಾಡವ **nāḍava.** a native. ಆ ನಾಡವರ್ಗಳ್ ಚದುರರ್ ನಿಜದಿಂ Kr. 1, 38. 2, N. of a caste.

**ನಾಡಾಡಿ nāḍu-āḍi.** a person who lives in the country, a country-man, a rustic, an ordinary, common person [ನೆಲಮೊಳ್ ಮಯ್ಯನೀಡಾಡಿ ನಾಡಾಡಿಯಲ್ಲದೆ ಪಳಯಿಸಿ Pb. 2, 24 va.; Ap. 1, 46]; (Bh. 3, 13, 41. Kāvy. III, 3, 120; Abh. P. 1, 99; 16, 15; C. Bp. 42, 31; My.). [Tu.].

**ನಾಡಾಡಿಗ nāḍu-āḍiga.** = ನಾಡಾಡಿ. (My.).

**ನಾಡಿ nāḍi.** = ನಾಲಿ, ನಾಳಿ, ನಾಱಿ, ಲಾಳಿ 1. *the tubular stalk or culm of any plant.* 2, *any tubular organ of the body*, as an artery, a vein, a nerve, etc. 3, *an artery.* 4, any pipe or tube; the box of a wheel. 5, a fistulous sore, a fistula. 6, the pulse. (Bp. 40, 16). 7, a measure of time = $\frac{1}{60}$ of a sidereal day, $\frac{1}{2}$ muhūrta. 8, *a period or hour of twenty-four minutes.* 9, a sort of bent grass. 10, a juggling trick, deception. ನಾಡಿ ಅಱುವತ್ತು ಆಗಲ್ ಒನ್ದು ತಿಥಿಯಕ್ಕು (Mr. 68). — ನಾಡಿ ಆಡು. the pulse to beat (My.). ನಾಡಿ ಆಡದವ ಓಡಿ ಬನ್ದಾನೇ? (Prv.). — ನಾಡಿ ನಡೆ. the pulse to beat (My.). — ನಾಡಿ ನಿಲ್ಲು. the pulse stand still or cease (My.). ನಾಡಿ ನಿತ್ತ ಮೇಲೆ ಕಾಡು ಪಾಲು (Prv.). — ನಾಡಿ ನೋಡು. to observe or feel the pulse (My.). ನಾಡಿ ನೋಡದೆ ಮದ್ದು ಕೊಟ್ಟರೆ ಕಾಡುರೋಗ ಬರುವದು (Prv.).

**ನಾಡಿಕೆ nāḍike.** = ನಾಱಿಗೆ. *the stalk or culm of any plant, a hallow stalk or stalk in general;* any tubular organ of the body; a fistulous sore. 2, an Indian hour or twenty-four minutes; a measure of time = $\frac{1}{60}$ of a siderial day, or = $\frac{1}{2}$ muhūrta. 3, a gong.

**ನಾಡಿಕೇರ nāḍikēra.** = ನಾರಿಕೇರ, ನಾಳಿಕೇರ. cocoanut tree. (ತೆಂಗಿನ ಮರ G.; Sk. ನಾಡಿಕೇಲ).

**ನಾಡಿಗ nāḍiga.** a village-superintendent.

**ನಾಡಿಗತನ nāḍigatana.** the business of a ನಾಡಿಗ (My.).

**ನಾಡಿಗಿತ್ತಿ nāḍiga-itti.** the wife of a village-superintendent (My.).

**ನಾಡಿದು nāḍidu.** = ನಾಡದು, etc. the day after tomorrow. [ಕೂಡುವಾ ಬಗೆಗೊಳೆ ನಾಳೆನಾಡಿದು ಮಹೋತ್ಸವದಿಂ ನಿಜ ಜೀವಿತೇಶನೊಳ್ Ap. 3, 50]; (Śmd. 400. 401; J. 10, 26). Gen. ನಾಡಿದಿನ, Dat. ನಾಡಿದಿಂಗ (Śmd.),

**ನಾಡಿದ್ದು nāḍiddu.** = ನಾಡಿದು, etc. (My.; ಪರಶ್ವಸ್ Si. 477). ನಾಳೆ ನಾಡಿದ್ದಱಲ್ಲಿ ಕೊಡುತ್ತೇನೆ (My.).

**ನಾಡಿನ್ಧಮ nāḍi-n-dhama.** = ನಾಳಿನ್ಧಮ. blowing through a tube: *a goldsmith.*

**ನಾಡೀಕೂಟ nāḍī-kūṭa.** one of the planetary conjunctions consulted by astrologers when matrimonial alliances are to be formed (My.).

**ನಾಡೀಪರೀಕ್ಷೆ nāḍī-parīkṣe.** feeling or examining the pulse; [understanding the feeling of people]. ನಾಡೀಪರೀಕ್ಷೆ ಆಡು ಬಲ್ಲದೇ (Prv.).

**ನಾಡೀವ್ರಣ nāḍī-vraṇa.** *a fistulous sore, a fistula.*

**ನಾಡು nāḍu.** fr. ನಡು 2. = ನಡ 1, ನಾಣ್ 1, ನಾಟ್. a (cultivated, planted) country (in opposition to a

kāḍu); a province, a district; the country (in opposition to a town; ಸೀಸ್ಮೃತ್, ಜನಪದ, ದೇಶ, ಉಪವರ್ತನ Hlā., Nr.. Mr. 189; ದೇಶ Nr. 50; C.; Te., T., M.). ನಾಡಿಗೆ or ನಾಟ್ಕೆ (Śmd. 140). [ಕಾವೇರಿಯಿಂದ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್ Kr. 1, 36; Pb. 1, 51 va. 2, common folk. ನಾಡಮಾತು ಬೇಡ, ಸೆಬಿಗೊಡ್ಡಿ ಬೇಡು ಕೂಡಲ ಸಂಗಮ ಶರಣರ Bv. 278]. ಆ ಪತಿ ಕೆಡಿಸಿದನ್ ಆ ನಾಡಂ; ಆ ನೃಪತಿ ನಾಡೆ ಕೆಡಿಸಿದ ನಾಡು (260). ಮುನ್ನೆ ಇರ್ದ ಕಾಡೆಲ್ಲಂ ನಾಡಾಗಿ ರಲ್ಕೆ (J. 29, 32). ನಾಡ ಸಿರಿ (3, 2). ನಾಡಿಗಿಬ್ಬರು ಅರಸರಾದರೆ ಕೇಡು ತಪ್ಪದು ತಪ್ಪದು.—ನಾಡು ಬೆಳದರೆ ಹಾಡಿ ಉಣ್ಣ ಬಹುದು.—ನಾಡೆಲ್ಲ ಬಿಟ್ಟ ರೂ ಸುಡುಗಾಡು ಬಿಡದು.—ನಾಡಿನ ಭೂತ ಪೀಡಿಸದೇ ಸಿತ್ತೀತೇ?—ನಾಡಿನಲ್ಲಿ ಇದ್ದರೂ ಆಡಿನ ಭಯ ತಪ್ಪಲಿಲ್ಲ.—ನಾಡು ಓಡುವಾಗ ಮೋಡಿಗಾಬಿ ಬನ್ದ.—ನಾಡು ಕೂಡಿದರೆ ನಗರಕ್ಕೆ ಕೇಡು.—ನಾಡುಗಳೆಲ್ಲ ಓಡುವಾಗ ಮೂಡೇ ಅಪೇಕ್ಷಿಸಿದ.—ನಾಡುಗಳೆಲ್ಲ ನಾಡಿಯಾದರೆ ನಗರಕ್ಕೆ ಗೂಢ.—ಜೋಡು ಇದ್ದರೆ ನಾಡು ತಿರುಗಬಹುದು (Prvs.). ನಾಡೆಷ್ಟು ದೇಶಕ್ಕೆ ರೂಢಿಪತಿಯೇ ಪ್ರಾಣ; ನಾಡಟಾಯಿ ರೂಢಿಪತಿ ಕೆಡುಗು. ಅರಸಟಾಯಿ ನಾಡೆಲ್ಲ ಕೆಡುಗು (Sp.). see Cpr. 1, 87; 5, 102; Abh. P. 4, 53 va.; Bp. 42, 6; 51, 6; 58, 38, C. Bp. 11, 5; Bh. 1, 8, 2. 84; J. 3, 5; 12, 2; 28, 22. 53; 29, 9; ನಡು-. — ನಾಡ ಮಾತು. = ನಾಣ್ನುಡಿ. (Bp. 44, 56; 51, 9; J. 5, 57; Prv. s. ಬಡವ). ಆಡಿ ಹುಸಿಯಲು ಹೊಲ್ಲ, ಕೂಡಿ ತಪ್ಪಲು ಹೊಲ್ಲ, ಕಾಡುವ ನೆಣ್ಣ ಬಿಬಿ ಹೊಲ್ಲ, ಮಾಸಿಸಿಗೆ ನಾಡ ಮಾತು (in opposition to ಮನೆಯ–) ಹೊಲ್ಲ (Sp.). — ನಾಡುಕಡೆ. = ನಾಟ್ಕಡೆ (Śmd. 28). the direction, etc. of a country, etc. — ನಾಡುಗವುಡ. the non-official headman of a district who in a private way settles disputes about caste affairs, etc. (My.). 2, an official headman of several villages (My.). — ನಾಡುಗಾದೆ. a saying or proverb of the country, a common proverb (ನಕ್ತ Ct. I, 75; My.). — ನಾಡುಶಾನಭೋಗ. the accountant of several villages (My.). — ನಾಡೆಱೆಯ. -ಎಱೆಯ. (Śmd. 161). = ನಾಡೊಡೆಯ. (Abh. P. 4, 36; 7, 49.). — ನಾಡೊಡೆಯ. -ಒಡೆಯ. = ನಾಟ್ಕೊಡೆಯ (Śmd. 167). the chief of a country or of a district (ಸಾಮನ್ತ G.; Bp 37, 68; 50, 36).

**ನಾಡೆ nāḍe.** further, moreover, much, greatly, excessively, etc. (ಅಣಿಯರ, ಅಧಿಕ Ct. I, 34; ಪಿರಿದುಂ, etc, ಅತ್ಯರ್ಥ II, 25; ಎಡೆ, ಅನಗಂ, ನೆಱೆ, ನೀಡುಂ, ಕರಂ, ಅದಂ, ಅಯ್ತೆ, etc., ಅಧಿಕ Śmd. 391, Śm. 58, Kk. 49; *cf.* ನಡೆ 4? Tu. ನಾಡು, T. ನಾಡು, ನೇಡು, M. ನಾಡು, to seek, inquire, search, desire greatly; see ನಿಟ್ಟಿಸು). [ನಡುವಣ ನಾಡೆ ನಾಡೆ ಕನ್ನಡದ ತಿರುಳ್ Kr. 1, 37; ಅಸ್ತು ನಾಡೆಯುಂ ಪೊಟ್ಟು ಜಲಕೇಳೀ ಲೀಲೆಯೊಳ್ ಮೆಱೆದು Pb. 5, 66 va.; Ap. 1, 46]. ಆ ನೃಪತಿ ನಾಡೆ ಕೆಡಿಸಿದ ನಾಡು (Śmd. 260). see Cpr. 1, 51. 70. 89; Abh. P. 5, 78; Grj. 4, 63; Bp. 15, 29; 26, 67; 54, 55; Śm. 6. 24. 32. 75. 118; J. 2, 64.

***ನಾಡೊವಜ nāḍovaja.** the teacher of the land; the poet Pampa. ಉನ್ತೆ ನಾಡೊವಜನಾದನೊ ಪೇೞ್ ಕವಿತಾಗುಣಾರ್ಣವಂ Pb. 14, 62.

***ನಾಡೋಜ nāḍōja.** = ನಾಡೊವಜ. ರಾಜ್ಯಲಕ್ಷ್ಮಿ ಬಳೆದ ಸನ್ತೋಷವನ್ನುಮನೆಯ್ದೆ ಪತ್ತಿದಳ್...ನಾಡೋಜನಂ Pb. 13, 108.

**ನಾಣ್- nāṇ. 1.** = ನಾಡು, etc. [— ನಾಣ್ನುಡಿ. -ನುಡಿ. — ನಾಣ್ನುಡಿ. ನುಡಿಗಳೊಡನ್ನುಡಲ್ ಬಗೆದ ಪೊಲ್ ಮಿಗಲೀಯದೊನ್ದ ನಾಣ್ನುಡಿಯ ಬೆಡಂಗೆ ಕನ್ನಡದ ಮಾತಿನೊಳ್ Kr. 1, 149; Pb. 12, 29 va.]. — ನಾಣ್ನುಡಿ. the talk of the country, popular report, public rumour, common talk, news, a proverb (ಲೋಕವಾರ್ತೆ Nr.; Abh. P. 16, 53; Grj. 10, 84 va.; Bp. 57, 13; Rām. 3, 2, 18; -, 4, 39; J. 17, 52; Te. ನಾನುಡು, ನಾನೊಡು).

**ನಾಣ್ nāṇ. 2.** (Śmd. 58). = ನಾಚಿಕೆ, etc. bashfulness, sense of shame, embarrassment, shame, modesty (Cpr. 8, 68; T. ನಾಣ್, ನಾಣ; M. ನಾಣ; Te. ನಾನೆ); [Tu. ನಾಣ್. nakedness]. inherent excellence, grace;–that is a cause of shame: the shame, an organ of generation (ಗುಹ್ಯ Ct. I, 29). [ಗುರುನಾಣ್ಬರದಿನ್ದಮೆಱಗಿ ಮುಖದಾವರೆಯಂ Kr. 1, 59; ನಾಣ ಪೆಸ್ಪೇಂ ಪಿರಿದೋ Pb. 1, 92; Ap. 11, 131]. ನಾಣಂ ಪಿಂಗಿಸಿ, ಮುಗ್ಧೆಗೆ ಜಾಣಂ ಕೆಯ್ಕೊಳಿಸುವನ್ತೆ (Śmd. 84). — ನಾಣಿಲಿ. -ಇಲಿ (Śmd. 220. 244). shameless; a shameless person (ಅಭಿಮಾನಗೇಡಿ Ct. I, 10; ಅಭಿಮಾನಗೇಡುಗ II, 17; ಲಜ್ಜಾವಿಹೀನ Kk. 39, Śm. 48; V. 35, 55 va.). [ಈಯೊಡಲೊಳಿರ್ದುದು ನಾಣಿಲಿ ಜೀವಂ Pb. 13, 4]. ನಾಣಿಲಿಯೆಂಸಿಸುವ ವಧು (Śmd. 221). — ನಾಣಿಲಿತನ. shamelessness (Cpr. 8, 69; V. 12, 71 va.). — ನಾಣಿಲಿವೆಣ್. -ಪೆಣ್. (Śmd. 221). a shameless woman. — ನಾಣೆಡೆ. -ಎಡೆ. the secret parts (C. Bp. 19, 32). [— ನಾಣ್ಕುಣಿ. to dance feigning modesty. ನಾಣ್ಕುಣಿದು ಮೆಟ್ಟುವ ಗುಜ್ಜರಿಗಟ್ಟೆ Pb. 4, 87]. [— ನಾಣ್ಗಾಪು. -ಕಾಪು. protection of honour, keeping up the sense of shame. ಎನ್ನ ತನ್ನ ನಾಣ್ಗಾಪನೆ ಬಗೆದು Pb. 1, 71 va.]. — ನಾಣ್ಗಿಡಿಸು. -ಕಿಡಿಸು. = ನಾಣ್ಗೆಡಿಸು. (Cpr. 4, 8). — ನಾಣ್ಗೆಡು. -ಕೆಡು. shame, or grace, to be lost or to go; to be disgraced (Abh. P. 11, 179). — ನಾಣ್ಗೆಡಿಕ. -ಕೆಡಿಕ. a man who has lost his shame (Bp. 38, 70). — ನಾಣ್ಗೆಡಿಸು. -ಕೆಡಿಸು. = ನಾಣ್ಗಿಡಿಸು. to destroy one's grace, to shame, to cover with reproach or ignominy, to disgrace, to dishonour (Rśv. 13, 61; C. Bp. 32, 44). — ನಾಣ್ಗೊಳ್. -ಕೊಳ್. to feel ashamed (Rśv. 11, 154. — ನಾಣ್ದಳೆ. -ತಳೆ. = ನಾಣ್ಗೊಳ್. (Rśv. 3, 4). — ನಾಣ್ದಾಣ. -ತಾಣ. = ನಾಣೆಡೆ. (Cpr. 8, 69; C. Bp. 20, 19). — ನಾಣ್ದಾಣಣ್ಬು. = ನಾಣ್ಬು. (Cpr. 8, 70). — ನಾಣ್ಬಿಡು. to relinquish shame or bashfulness (Cpr. 6, 83; Rśv. 8, 85). — ನಾಣ್ಬೆರಸು. the state of being united with shame (Cpr. 1, 23). — ನಾಣ್ಮೀಸಲ್. intact, undefiled sense of shame, etc. (J. 11, 22).

**ನಾಣ nāṇa.** Tbh. of ನಾರಾಯಣ. Viṣṇu. (My.).

**ನಾಣಕ nāṇaka.** = ನಾಣೆಯ, etc. a coin or anything stamped with an impression (Sk.).

**ನಾಣಿ nāṇi.** Tbh. of ನಾರಾಯಣಿ. Lakṣmī. (My.). 2, = ನಾಣ (My.).

***ನಾಣಿಲಿಗ nāṇiliga.** person devoid of any shame. ಇನ್ತು ನಾಣಿಲಿಗರಪ್ಪರೆ ಮಾನಸರ್ Pb. 2, 48. @ here two derivative suffixes –ಇಲಿ and –ಇಗ are employed.

**ನಾಣೆಯ nāṇiya.** = ನಾಣ್ಯ. a coin. (ಟಂಕ Nn. 129; Rām. 6, 55, 18; My.; M.; T. ನಾಣಯ).

***ನಾಣು nāṇu.** = ನಾಣ್. ನಾಣುಗೆಟ್ಟಾದರೂ ಲಿಂಗವನೊಲಿಸುವೆ Bv. 496; Cv. 187.

**ನಾಣ್ಚಿಸು nāṇcisu.** = ನಾಚಿಸು, etc. to cause shame, etc. (Rśv. 11, 160 va.).

**ನಾಣ್ಚು nāṇcu.** = ನಾಚು, etc. to become abashed (ಲಜ್ಜ Śmd. Dh.; Cpr. 3, 62; Grj. 2, 106 va.; Bp. 8, 45; Rśv. 11, 128; T. ನಾಣು). [ತತ್ಕನ್ನಿಕೆ ನಾಣ್ಚಿ ಬೇಡುವೊಡೆ ಸೀನೆಮ್ಮಯ್ಯನಂ ಬೇಡಿರೇ Pb. 1, 70; Ap. 14, 119]. see ನಾಣ್.

**ನಾಣ್ಟು nāṇṭu.** = ನಾಟು 1, etc. to be pierced or struck into. (ಅನ್ತರ್ಭೇದ Śmd. Dh.; ನಸು ನಡು Ct. I, 7). ಮಹಾರಥರ ಜವನಾಳನ್ತೆ ಅಪ್ಪ ಕಣೆ ರೋಮರೋಮನ್ದಪ್ಪದೆ ನಾಣ್ಟುವುವು (Abh. P. 13, 71). ಕೋಲ್ ವಕ್ಷದೊಳ್ ನಾಣ್ಟಲ್ (J. 7, 49). see J. 4, 44; 21, 14. 20. 36; 22, 31. 44; 31, 54; Śsv. 1, 10.

***ನಾಣ್ಪೋಗು nāṇpōgu.** a concealed (?) path taken by animals. ಮೂಡು ಕೊಮ್ಪುಮನಾಡು ನಾಣ್ಪೋಗುಮನ್ Pb. 5, 43 va.

**ನಾಣ್ಯ nāṇya.** fineness, goodness, good quality, as that of cloth, grain, character, etc., honesty, truth [ತೊಟ್ಟು ಲಕ್ಷಣವಿರಲು ನಾಣ್ಯವನುಡಿಸಿ ನವರತ್ನಾಭರಣಂಗಳ ತೊಡಿಸಿ Cv. 367]. (My.; Te. ನಾಣೆಮು, ನಾಣೆಮು, ನಾಣ್ಯಮು; T. ನಾಣಯ, ನಾಣ್ಯೆ ಯ; M. ನಾಣಯ, ನಾಣ್ಯ; see ನಚ್ಚು 1, ನಣ್ಪು 1 & 2, ನಯ).

**ನಾಣ್ಯ nāṇya.** = ನಾಣಕ, ನಾಣ್ಯೆಯ, ನಾಣ್ಯೆ. a coin; money (My.; Si. 330. 418; B. 4, 95. 106. 125; M.; Te. ನಾಣೆಮು, ನಾಣ್ಯಮು; Mhr. ನಾಣೇಂ). 2, small pieces of silver money (My.). ನಾಣ್ಯವಿದ್ದವ ನಾಯಕ.—ನಾಣ್ಯವಿಲ್ಲದವ ನೊಣಕ್ಕಿನ್ನ ಕಡೆ.—ನಾಣ್ಯದ ಲಕ್ಷಣ ವಾಣಿಜಗೆ ತಿಳಿಯದೇ?—ಚಿನ್ನಿವಾರನ ಮನೇ ನಾಯಿಯಾದರೆ ನಾಣ್ಯದ ನೋಟಾ ಬಲ್ಲ ದೇ?—ಹಾಡೆಗಾಱಿಗೆ ನಾಣ್ಯ ಕೊಟ್ಟವನೇ ಜಾಣ (Prvs.). see Prv. s. ನೇ ಯುಗೆ.— ನಾಣ್ಯಪರೀಕ್ಷೆ. assaying money, assay (My.; Mhr.). — ನಾ ಣ್ಯವಟ್ಟ. the agio on money (My.) — ನಾಣ್ಯವಾರು. the detailed account of various coins (My.).

**ನಾಣ್ಯಗಾಱ nāṇya-gāṟa.** a good, proper or honest man (My.).

**ನಾಣ್ಯೆ nāṇye.** = ನಾಣ್ಯ. (G. 266. 442).

**ನಾತ nāta.** (fr. ನಾಱು 1). = ನಱು, ನಾ 3, ನಾತು 2, ನಾನ್ದ, ನಾಱ, ನಾಱು 2. smell in general; a bad smell (ಹಸುಕು, ಸೊನಡು, ಸೊಗಡ, ಕೂರಿತ್ತಾದ ಗನ್ಧ Śm. 23; My.; Tu., T., M. ನಾಱ್ಱ). [ಆರೊ ಸ್ಯೆರಿಸುವರಾತನ ಪಲ್ಲಿಲಿವಾಯ ನಾತಮಂ Pb. 4, 100]. ಹೊಲ್ಲಹ ನಾತ (ದುರ್ಗನ್ಧ, etc. Nr.). ಕೆಟ್ಟ ನಾತವುಳ್ಳ ವಸ್ತು (ಪೂತಿಗನ್ಧ, ದುರ್ಗ ನ್ಧ Si. 51). ನಾತವಾಗಲಿ ಪರಿಮಳವಾಗಲಿ ವಾತಕ್ಕೆ ಭೇದವಿಲ್ಲ.—ಕೂತರೂ ನಾತ ಹೋದೀತೇ? ಹೇತದಕ್ಕಿನ್ನ ಹೆಚ್ಚು!—ನಡುಮನೆಯಲ್ಲಿ ಹೇತು, ನಾತ ಬರುತ್ತೆ ಎನ್ನ (Prvs.). see Bp. 46, 59; B. 2, 47; 3, 85; 4, 86; 5, 261; Prv. s. ಪ್ರೇತ.— ನಾತಹೂ. the shrub Lantana aculeata L., native of America (St. & Pl.; My. as ನಾತದ–).

**ನಾತಿ nāti.** (fr. a ನಾಯಿತಿ. = ನಾಯಕಿ). = ನಾಚಿ. a mistress, a lady (T. ನೈತಿ, ನಾಯಗಿ, ನಾಚ್ಚಿ; M. ನಾಯಗಿ, ನಾಯಿಗೆ, ನಾಚ್ಚಿ); a woman (Te. ನಾತಿ, ನಾತುಕೆ, ನೆಲತೆ).

**ನಾತು nātu.** 1. P. p. of ನಾಱು 1.

**ನಾತು nātu.** 2. = ನಾತ, etc. (B. 5, 164). ಕೆಟ್ಟ ನಾತು (ಅಸುವಾ ಸನೆ), ಕಮರ ನಾತು (ಕವುರು), ಮುಗ್ಗ ನಾತು (ಜೀರ್ಣಾವಗನ್ಧ), ಹೊಲಸು ನಾತು (ಸಿಣ್ಣುವಾಸನೆ G.). ಸುಟ್ಟ ನಾತು (ಸೊಡರು Cb).

**ನಾತು nātu.** 3. = ನಾದು 3. P. p. of ನಾನು 2.

**ನಾಥ nātha.** a protector, a patron; a master, ruler, lord, a leader; a husband (ಒಡೆಯ Mr. 227). ನಾಥನಾಗ ಬೇಕೆನ್ನು, ಸ್ವಾರ್ಥ ಮಾಡಿದರೆ ವ್ಯರ್ಥವೇ ಸರಿ.—ನಾಥನಾದರೂ ಭೂತ ಬಿಡದು.—ನಾಥನಾದರೂ ವಾತ ಬಿಡದು (Prvs.).

**ನಾಥವತ್ nātha-vat.** having a protector, etc.; *dependent, subject.*

**ನಾದ nāda.** a loud sound, cry, roaring, crying, etc. 2, *a sound, a tone in general* (B. 4, 10); a note of the musical scale or gamut (ಏಱು ನಾದ Mr. 500). — ನಾದಕಟ್ಟು. the adjustment of sound, the act of producing the full, proper sound. ನಾದಕಟ್ಟಿನ ಸಲುವಾ ಗಿ ವೀಣೆಯ ಕೆಳಗೆ ಇರುವ ಕುಮ್ಬಳಕಾಯಿ (ಪ್ರಸೇವಕ G.)

**ನಾದನಿ nādani.** = ನಾದಿನಿ, ನಾದುನಿ. Tbh. of ನನಾನ್ದೃ. a husband's sister (Bp. 45, 24; My.; M. ನಾತ್ತೂನ್; T. ನಾತ್ತನಾರ್); a brother's wife (see ನಾದುನಿ).

**ನಾದಮೂರ್ತಿ nāda-mūrti.** who has the form or is the embodiment of the sound ಓಂ: Śiva (Grj. 10, 61 va.; Bp. 2, 4).

**ನಾದಾರಿ nādāri.** insolvency; pauperism (Mhr., H.).

**ನಾದಾರು nādāru.** insolvent; a pauper (My.; Mhr., H.).

**ನಾದಿಗ nādiga.** Tbh. of ನಾಪಿತ. (My.; S. Mhr. ನಾದಿಗ್ಯ).

**ನಾದಿನಿ nādini.** = ನಾದನಿ, etc. (ಗಣ್ಡನ ಅಕ್ಕ G.; ನನಾನ್ದೃ, etc., ಗಣ್ಡನ ಒಡ ಹುಟ್ಟಿದವಳು Si.; My.; Bp. 40. 46). ನಾದಿನಿಯಾದರೆ ಹಾದಿಲಿ ಜ ದ್ದಾ ಳೇ?—ತಮ್ಮ ನಮ್ಮನವಾದರೂ ನಾದಿನಿ ನಮ್ಮವಳಲ್ಲ (Prvs.).

**ನಾದಿಸು nādisu.** to knead (My.).

**ನಾದಿಸು nādisu.** to sound, to resound, etc. (My.).

**ನಾದು nādu.** 1. to knead, as dough, etc. (My.; B. 4, 55; see s. ನನೆ and ನಳ). ನಾದಿದ ಹಿಟ್ಟಿಗೆ ಸ್ವಾದ ಹೋದೀತೇ?—ಕನ್ನು ಇಯ. ಮೇಲೆ ಕಣಕಾ ನಾದಿದ (Prvs.).

**ನಾದು nādu.** 2. = ನಾನ್ದು 1, ನಾಱು 3. to moisten, to wet, to soak, to steep; to cool (Bp. 47, 57; 57, 18; Bh. 1, 3, 21; 3, 6, 22; 7, 1, 18; 7, 7, 45; 7, 16, 10. 30; 8. 27. 4; J. 7. 47; 14, 16; Te. ನಾನುಪು; cf. ನಾನ್ 2).

**ನಾದು nādu.** 3. = ನಾತು 3. P. p. of ನಾನು 2.

**ನಾದುನಿ nāduni.** = ನಾದನಿ, etc. husband's sister. (ಪ್ರಜಾವತಿ, ಭ್ರಾತೃ ವಧು Hlā.; ಪ್ರಜಾವತಿ Mr. 312). [ನಾದುನಿಯೊಲ್ಲು ಮೊಲ್ಲದನ್ನಳೆ Pb. 4, 98].

**ನಾದೇಯ nādēya.** (fr. ನದಿ). coming from or belonging to a river; aquatic; a sort of salt.

**ನಾದೇಯಿ nādēyi.** *a species of reed growing usually near water, Calamus fasciculatus.* 2, *the orange-tree* (see ನಾಯಿನೇಱಿಲ್ and ನಾ ರಂಗ). 3, *a shrub or small tree, Sesbania aegyptiaca* Pers. 4, the China rose or shoe-flower plant, Hibiscus rosa sinensis Lin.

**ನಾನ್ nān.** 1. = ಆಂ 1, etc., ನಾನು 1. I. it is used, instead of ನಾಂ, before a vowel; its declension appears under ನನ್ 1; its plural is ನಾವು. see *e. g.* Bp. 3, 22; 10, 10; 17, 13; 21, 46; 22, 18. 60; 27, 14; 40, 30.

**ನಾನ್ nān.** 2. = ನನೆ 1, ನಾನು 2, ನಾಱು 3. to get wet, moist, damp, or soaked (ಆರ್ದ್ರೀಭಾವ Śmd. Dh.; Tu. ಞಾಂಙ್. to loose crispress; Te. ನಾನು; T., M. ನಾನ್ದು; T. ನಜ್ಜೆ, moisture of the earth). P. p. ನಾನ್ದು [ಅನಿತು ಜಡೆಯುಮಂ ನಾನ್ದಿ Pb. 1, 105; Ap. 11, 62]; (Cpr. 7, 132; 8, 6; Rśv. 1, 117; 8, 125). ನಾಮ್ಪಂ (Śmd. 275). ನಾಮ್ಪು (Cpr. 8, 69). [— ನಾಮ್ಪಿನಂ. so as to get wet, moist. Pb. 4, 108].

**ನಾನಲ್ nānal.** = ನಳ್ಳು 2. a kind of reed (T. ನಾಣಲ್). ನಾನಲುಳ್ಳ ಭೂಮಿ (ನಡ್ವಲ, ನಲಸಂಯುತ Hlā.).

**ನಾನಾ nā-nā.** nothingness, emptiness, non-existence (ಶೂನ್ಯ, ಶೂ ನ್ಯವಾದುದು Nn. 145); *without, except.* 2, of different kinds, various, sundry, manifold, diverse; *variously, manifoldly* (ದೊಡ್ಡಿತು 145; ಪಿರಿದು Mr. 537). 3, egotism, conceit (ಅಹಂಕಾರ 145). 4, boldness, daring (ಅದಟು, ಸಾಹಸ 145). in My. *e. g.* ನಾನಾ ಕಾರ್ಯ, various business or affairs; ನಾನಾಕೆಲಸ, various business or work; ನಾನಾಪ್ರಕಾರ, diverse kinds or ways, or in various ways; etc., etc. — ನಾನಾರಾಯ. Nānāsāheb, the rich Mahratta Pēśvā (and traitor). ನಾನಾರಾಯನ ಹತ್ತರ ಹೋಗಿ, ನಾಲ್ಕು ಕಾಸು ಬೇಡಿದ (Prv.).

**ನಾನಾರೂಪ nānā-rūpa.** various forms; *of different forms or shapes, multiform, various* (see ನಾನಾರೂಪು s. ವೇಷ್ಟ).

**ನಾನಾರ್ಥ nānā-artha.** having a different aim or object. 2, having different meanings (Śmd. 298), (having the same sound as another word, but) differing (from it) in meaning, homonymous: *a homonym.* ಒನ್ದು ಶಬ್ದಕ್ಕೆ ಪಲವರ್ಥಮುಂ ಪಲವರ್ಥಕ್ಕೆ ಒನ್ದು ಶಬ್ದವ ನುಡಿವ ಬೆಡಗುಮುಂ. ನಾನಾರ್ಥಮೆನ್ದು. ಪೇೞ್ವಂ (Mr. 465).

**ನಾನಾರ್ಥರತ್ನಾಕರ nānārtha-ratnākara.** a dictionary which contains words with different meanings by Dēvōttama (Nn. 3. 167. 168).

**ನಾನಾವಿಚ್ಛಿತ್ತಿಚಿತ್ರ nānā-vicchitticitra.** various vicchitticitras (Kāvy. III, 2. B, 56).

**ನಾನು nānu. 1.** = ನಾನ್ 1, etc. I (C.). ನಾನು ಮುನ್ದು, ತಾನು ಮುನ್ದು ಎನ್ನುವಾಗ ಮಾಡಲ್ ಪಡುವ ಕೆಲಸ (ಅಹಮ್ಪೂರ್ವಿಕೆ Si. 293). ನಾನು ನೀನು ಅನ್ನಾ ಕ್ಷಣ ಹಾಳಿಯೇನು?—ನಾನು ನಾಯಕ, ನೀನು ನಾಯಕ, ತೋಣೆ ಒತ್ತುವವ ದೊಣ್ಣಪ್ಪನಾಯಕನೋ?—ನಾನು ಹಿಡಿದ ಮೊಲಕ್ಕೆ ಮೂಱೇ ಕಾಲು.—ನಾನು ಹುಲಿಯಾದರೆ ನನ್ನ ಅಣ್ಣ ಹೆಬ್ಬುಲಿ.—ನಾನೂ ನಾಗಪ್ಪನೂ ಕೂಡಿ ಕಟ್ಟಿದ್ದು! ಎನ್ದು, ಓತಿ ಹೇಳಿದನ್ತೆ.—ನಾನೇ ಒಲ್ಲೆ ಎನ್ನಲು ನಮ್ಮಪ್ಪ ಯಾರಿಗೆ ಮದುವೆ ಮಾಡ್ಯಾನು?—ನಾನೊನ್ದು ಬಗೆದರೆ, ದೇವರೊನ್ದು ಬಗೆದನು (Prvs.).

**ನಾನು nānu. 2.** = ನಾನ್ 2. P. ps. ನಾತು, ನಾದು (My.).

**ನಾನ್ತ nānta.** = ನಾತ, etc. smell. (ಸೊಪಡು, ನಱು, ನವುಸನ, ಗಮಗಮಿಸಿತು, ವಾಸನೆ Kk. 55). ಕಿಱಾದು ನಾನ್ತ (ಕಮ್ಮು Ct. I. 22).

**ನಾನ್ತ na-anta.** ending in ನ; a term ending in ನ (Śmd. 228. 274. 316).

**ನಾನ್ದಿ nāndi. ನಾಂದೀ** joy; prosperity. 2, eulogium or praise of a deity; *a prayer recited in benedictory verses at the opening of a religious ceremony or of a drama, generally a kind of blessing pronounced as a prologue to a nāṭaka or play* (ಪೂರ್ವಾರ್ಥಂ Ct. I, 33; Ch.). 3, = ನಾನ್ದೀಮುಖ No. 2 (My.).

**ನಾನ್ದೀಕರ nāndī-kara.** *the speaker of the benedictory prologue at the opening of a drama.*

**ನಾನ್ದೀದೇವತೆ nāndī-dēvate.** = ನಾನ್ದೀಮುಖ No. 1. (My.).

**ನಾನ್ದೀಮುಖ nāndī-mukha.** the class of manes of deceased progenitors to whom the nāndīmukha-śrāddha is offered. 2, the nāndīmukha-śrāddha, *i. e.* a śrāddha or commemorative offering to the manes preliminary to any joyous occasion, as initiation, marriage, etc. (My.).

**ನಾನ್ದೀವಾದಿ nāndī-vādi.** *the speaker of the benedictory prologue at the opening of a drama.*

**ನಾನ್ದೀಶ್ರಾದ್ಧ nāndī-śrāddha.** = ನಾನ್ದೀಮುಖ No. 2. (My.).

**ನಾನ್ದು nāndu. 1.** = ನಾದು 2. to make damp, to cool, etc. (Rśv. 9, 7).

**ನಾನ್ದು nāndu. 2.** (Śmd. 48). to liquefy, to dissolve, to melt (ದ್ರವೀಕರಣ Śmd. Dh.; *cf.* the M. s. ನಳ).

**ನಾಪಿಕ nāpika.** (Mhr. ನಾಪೀಕ, failure of the crop; sterile, poor; Mhr., H. ನಾಪಾಕ, impure, vile). ನಾಪಿಕ ಅನ್ನಾ ಕ್ಷಣ ಪಾಪ ಬನ್ದೀತೇ? (Prv.).

**ನಾಪಿಗ nāpiga.** Tbh. of ನಾಪಿತ. (ನಾಪಿತ Cb.).

**ನಾಪಿತ nāpita.** = ನಾದಿಗ, ನಾಪಿಗ, ನಾಯನ್ದ, ನಾಯಿನ್ದ, ನಾವಲಿಗ, ನಾವಲಿಗ, ನಾವಿದ, ನಾವಿನ್ದ. *a barber.*

**ನಾಪಿತಿ nāpiti.** the wife of a barber; a woman of the barber-caste (ನಾವಲಿಗಳು Cb.; Sk.).

**ನಾಪಿತೆ nāpite.** = ನಾಪಿತಿ. (J. 5, 58).

**ನಾಭ nābha.** = ನಾಭಿ. the navel, etc. see ಊರ್ಣ–, ಪದ್ಮ–.

**ನಾಭಸ nābhasa.** (fr. ನಭಸ್). celestial, heavenly, appearing in the sky. (Cpr. 4, 30).

**ನಾಭಿ nābhi.** *the navel.* 2, *the nave of a wheel.* 3, the centre, focus, central point, middle; chief, head. 4, the close connection of relations, near relationship, community of race or family; a near relation. 5, a sovereign, an emperor; *a Kṣatriya.* ನಾಭಿವರಿ ಯನ್ತರ ಉಟ್ಟಾ ಕ್ಷಣ ಲೋಭತ್ವ ಹೋದೀತೇ? (Prv.). see ಪೊಕ್ಕುೞ್. — ನಾಭಿಗೋಲ್. -ಕೋಲ್. the measure of two cubits. ಮೊಱನೆರ ಪಾಗೆ ನಾಭಿಗೋಲೆನ್ಸಿಕ್ಕು (Mr. 325).

**ನಾಭಿನಾಲ nābhi-nāla.** the umbilical cord. (My.).

**ನಾಭಿರಾಜ nābhi-rāja.** an ancient king mentioned by Jainas (Abh. P. 1, 89).

**ನಾಮ nāma. 1.** bending. see ಪರಿಣಾಮ, ಪ್ರಣಾಮ.

**ನಾಮ nāma. 2.** *a name* (ಹೆಸರ್ Nn. 16; ಪೆಸರ್ 162). 2, *a noun* (Śmd. 6. 63. 88. 93; Kāvy. I, 6; I, 1*b*, 1-5; I, 2, 1 seq ); a word. 3, *by name.* 4, *possibly, perhaps.* 5, *agreed, granted* (ಅಹುದೆನಿಪಾ ಕಾರ್ಯ 162). 6, *an expression of anger, contempt, reproach, etc.* 7, the sectarian mark applied by Vaiṣṇavas to their forehead, etc. (My.). 8, the white clay used for applying that mark (My.). ನಾಮವಿದ್ದವನಿಗೆ ಕಾಮ ಕಡಿಮೆಯೇ?—ನಾಮವಿದ್ದವ ಗ್ರಾಮದವರಿಗೆ ಬೇಕು.—ನಾಮವಿದ್ದಾಗ್ಯೂ ನಮ್ಬಿಗೆಯಿರ ಬೇಕು.—ನಾಮವಿಲ್ಲದ ಅರಸನಿಗೆ ನೇಮವಿಲ್ಲದ ಪ್ರಧಾನಿ.—ನಾಮವುಳ್ಳವ ನಾಕ ಪಡೆಯನೇ? (Prvs.). see Prv. s. ಬಡ ದಾಸ. — ನಾಮಗೋಳಿ. -ಕೋಳಿ. the pigmy cormorant, Carbo pygmens (Bḍ ) — ನಾಮದ ಪೆಟ್ಟಿಗೆ. a box containing the necessaries for putting on the Vaiṣṇava marks (My.). — ನಾಮದ ಬೇರು. a twining shrub, the country Sarsaparilla, Hemidesmus indicus R. Br. (St. & Pl.; My.). — ನಾಮದ ಹಾವು. the snake Trimeresurus stricatus (My.). — ನಾಮ ಹಾಕು. to put on the Vaiṣṇava marks (My.). 2, to cheat (My.). ನಾಮ ಹಾಕಿದವನಾದರೆ ಹೋಮಾ ಮಾಡ್ಯಾನೆ? (Prv.).

**ನಾಮಕ nāmaka.** = ನಾಮ. see ಅ–.

**ನಾಮಕರಣ nāma-karaṇa.** naming a child after birth; the ceremony of naming a child after birth (My.). ನಾಮಕರಣವಿದ್ದಲ್ಲಿ ಹೋಮಕರಣ (Prv.). — ನಾಮಕರಣಂಗೆಯ್. -ಂ-ಗೆಯ್. to name a child after birth ( J. 28, 60).

**ನಾಮದಾರ nāma-dāra.** renowned, famed (My.; B. 4, 116; Mhr., H.).

**ನಾಮಧಾರಿ nāma-dhāri.** having a name, renowned. 2, having the same name as another. 3, having only the name; nominal. 4, a person who wears the sectarian Vaiṣṇava marks, a vaiṣṇava (My.). 5, a class of Vaiṣṇavas who apply three marks to their forehead, etc., and are followers of Rāmānuja (My.). — ನಾಮಧಾರಿ ಸೀರೆ. a black sire with white stripes (My.).

**ನಾಮಧೇಯ nāma-dhēya.** *a name, a title, an appellation.*

**ನಾಮನಕ್ಷತ್ರ nāma-nakṣatra.** the constellation corresponding to a person's name. the natal constellation ( janmanakṣatra) of a person, when forgotten, is found out from the initials his name bears, and certain corresponding syllables denoting the constellations (My.).

**ನಾಮಪದ nāma-pada.** a complete word, *i. e.* an inflected word with the case-terminations added (Śmd. 47. 61. 97. 194; Kāvy. I, 3, 1-4).

**ನಾಮಪ್ರಕೃತಿ nāma-prakṛiti.** an uninflected noun or word (Śmd. 98).

**ನಾಮರೂಢಿ nāma-rūḍhi.** the conventional meaning of a word (Śmd. 62).

**ನಾಮರ್ದಾ nā-mardā.** unmanliness, cowardice; a coward (also ನಮರ್ದು; My.; Br.; Mhr., H. ನಮರ್ದ, ನಮರ್ದೀ).

**ನಾಮಲಿಂಗ nāma-liṅga.** a nominal base, an uninflected word (Śmd. 47. 88. 90. 94).

**ನಾಮವಚ nāma-vaca.** = ನಾಮವಾಚಕ. ವಸ್ತುನಿಕಾಯನಾಮವಚ ನಿರ್ದಿಷ್ಟಂಗಳ್ (ಲೋಕವಸ್ತುಗಳ ಹೆಸರು ಹೇಳುವವು Nr. 117).

**ನಾಮವಾಚಕ nāma-vācaka.** expressing a name: a noun; a proper name. (My.).

**ನಾಮವಿಭಕ್ತಿ nāma-vibhakti.** a nominal affix (Śmd. 47. 61. 89. 115).

**ನಾಮಸಂಕೀರ್ತನ nāma-saṅkīrtana.** celebrating the name of a god, king, etc. (My.).

**ನಾಮಸ್ಮರಣ nāma-smaraṇa.** bearing in or calling up into the mind the name or names of a god, king, etc. (My.).

**ನಾಮಾಂಕ nāma-aṅka.** marked with a name. 2, N. of a vṛitta. (Ch.).

**ನಾಮಾಂಕಿತ nāma-aṅkita.** renowned (B. 4, 146. 222; My.).

**ನಾಮಾನ್ತರಿತ nāma-antarita.** N. of one of the pēlikes (Kāvy. III, 2, B, 82 seq.).

**ನಾಮಿ nāmi. 1.** bending; changing a dental to a cerebral: a name given to all the vowels except ಅ and ಆ (Śmd. 16. 17; Kāvy. I, 1a, 12-14).

**ನಾಮಿ nāmi. 2.** Tbh. of ನವಮಿ (Śmd. 352. 361; Śm. 19; see ಮಾ-).

**ನಾಮಿಕ nāmika.** relating to a name or noun. 2, having only the name (of being a religious person, Bp. 50, 48).

**ನಾಮೂಷಿ nāmūṣi.** disgrace, shame (My.; Br., H.).

**ನಾಮೆ nāme.** a deed: letters patent (My.; Br., H.).

**ನಾಮ್ಬ nāmba. 1.** see s. ನಾನ್ 2 and G. s. ತೋಸು.

**ನಾಮ್ಬ nāmba. 2.** an idle, slothful man (ಸುಮ್ಬ, ಅಲಸುಗೆಗಾಱ Ss.; ಸೊಮ್ಬ, ಅಲಸುಗೆಗಾಱ Kk. 38; ಸೊಮ್ಬ, ಅಲಸುಗಾಱ Śm. 47; T. ನಾಮ್ಪು = ನಮೆ; ನಾಲು = ಸೇಲು; see ನೇಲ್).

**ನಾಮ್ಬು nāmbu.** to be slack, devoid of energy, slothful or idle (ಆಲಸ್ಯ Śmd. Dh.).

**ನಾಯ್ nāy.** = ನಾಯಿ. a dog (My.; Tu., M.; T. ಞಮಲಿ, ಞಾಳಿ, ನಾಯ್, ನಾಳಿ). [ನಾಯ್ವೋಲಿಲಿಯೆಯಂ ಕರಂ Kr. 3, 89; Pb. 5, 47 va.]. ತಾಯನ್ತಾ ಕಱು, ನಾಯನ್ತಾ ಬಾಲ (Prv.). ನಾಯ್ಕ ಸೋವು ವುದು (ಪಱು Śmd. I). ನಾಯ ಬಾಲ ಸೆಡೆಯಂ ಕಟ್ಟಿಲ್ಕೆ ಚನ್ನಪ್ಪುದೇ? (Sš. 85). ನಾಯಂ ಕರೆವುತ (Bp. 20, 13). ನಾಯ್ಗಳ್ (J. 28, 41.,46). see Bp. 21, 44; 55, 43; 60, 48. 51; ಕೂರ್ನಾಯ್, ಗಬ್ಬಿ-, ತುಡುಗುಣಿ-, ದೊಡ್ಡ-. — ನಾಯತ್ತಿ. -ಅತ್ತಿ. the opposite-leaved fig-tree, Ficus oppositifolia (ಕಾಕೋದುಮ್ಬರಿಕೆ, ಫಲ್ಗು, ಮಲಪು, ಜಘನೇಫಲೆ Nr.). — ನಾಯ್ಬಜಾಯಿ. -ತಜಾಯಿ. a kind of fetid Mimosa, Vachellia farnesiana W. & A. (ಅರಿಮೇದ, ವಿಟ್ಖದಿರ Nr.). — ನಾಯ್ನೊಳಲೆ. a kind of worm (ಗಣ್ಡೂಪದ, ಕಿಂಚುಲಕ Hlā.). — ನಾಯ್ಬದುಕು. the life of a dog, a wretched, miserable existence or livelihood, etc. (Bp. 61, 19; My.). — ನಾಯ್ಪಾಡು. = ನಾಯ್ಬದುಕು. (My.). — ನಾಯ್ಬೇಲ. = ನಾಯಿಬೇಲ. (My.). — ನಾಯ್ಪಾಲ್. -ಪಾಲ್. dog's milk (Bp. 54, 30). — ನಾಯ್ಸೆಸರ್. -ಪೆಸರ್. a dog's or the dog's name (Śm. 31).

**ನಾಯ nāya. 1.** *leading, conducting, guiding, directing.*

**ನಾಯ nāya. 2.** = ನೇಯ 1, q. v. Tbh. of ನ್ಯಾಯ. a lawsuit (My.), etc. ಇಬ್ಬರ ನಾಯ ಒಬ್ಬನಿಗಾಯ (Prv.).

**ನಾಯಕ nāyaka.** = ನಾಯಿಕ. *a guide, a leader; a chief, a master, lord, a head;* a general, a commander; a husband. 2, preeminent, principal, chief. 3, a title for a man of the bēḍa or hunter-caste (My.). 4, *the central gem of a necklace.* ನಾಯಕನಿಲ್ಲದ ಊರಲ್ಲಿ ಕಾಯಕ ಸಿಕ್ಕೀತೇ?—ನಾಣ್ಯವಿಪ್ಪನ ನಾಯಕನು (Prvs.).

**ನಾಯಕತ್ವ nāyakatva.** leadership, headship, chieftainship. (My.).

**ನಾಯಕನರಕ nāyaka-naraka.** the principal hell [Bv. 567]; (Abhā. 2, 21).

**ನಾಯಕಮಣಿ nāyaka-maṇi.** = ನಾಯಕ No. 4. the central gem of a neck-lace (My.; Si. 217).

**ನಾಯಕಮಣ್ಡಲೀಕ nāyaka-maṇḍalīka.** the chief governor or lord of a district (Bp. 59, 27).

**ನಾಯಕವಾಡಿ nāyaka-vāḍi.** a chief, a headman, as of a caste, a village, etc. (My.; Bh. 6, 4, 110; 8, 23, 6; Te. ನಾಯಕವಾಡಿ, -ವಾಳಿ).

**ನಾಯಕಸಾನಿ nāyaka-sāni.** a dancing-girl, a whore (My.; ಪಾತರ ದವಳು, ವಾರಸ್ತ್ರೀ G.).

**ನಾಯಕಿ nāyaki.** = ನಾಯಿಕೆ. a mistress, etc. (My.; J. 6, 37; 26, 21).

**ನಾಯಕಿತ್ತಿ nāyaka-itti.** = ನಾಯಕಿ. (Bh. 7, 2, 20).

**ನಾಯನ್ದ nāyanda.** Tbh. of ನಾಪಿತ. ನಾಯನ್ದರವನು (ಗ್ರಾಮಣಿ, ನಾಪಿತ Si. 419; *only* in Si.).

**ನಾಯಬ nāyaba.** a deputy (B. 5, 263. 269; My.; Mhr., H. ನಾಈಬ, ನಾಯಬ). — ನಾಯಬಶಿರಸ್ತೆದಾರ. a native head clerk in an assistant collector's office (My.).

**ನಾಯಿ nāyi.** = ನಾಯ್. a dog. (ಕೌಲೇಯಕ, ಸಾರಮೇಯ, ಶುನಕ, ಭಷಣ, ಶ್ವನ್, ಕುರ್ಕುರ, ಶಾಲಾವೃಕ, ಮೃಗದಂಶ Hlā.; Si. 343; C.). ಬೇಟ್ಟೆಯ ನಾಯಿ (ವಿಶ್ವಕದ್ರು); ಪೇಂಕುಳಿಯ ನಾಯಿ (ಅಲರ್ಕ Hlā.). ಮದ್ದಿಪ್ಪ ಹೇಕುಳಿಗೊಣ್ಡದ್ದ ನಾಯಿ (ಅಲರ್ಕ Nr.). ನಾಯಿ ಕೂಗಿದರೆ ದೇವಲೋಕ ಹಾಳಾದೀತೇ?—ನಾಯಿಗೆ ಕೆಲಸವಿಲ್ಲ, ಕುಣ್ಡುಲಿಕ್ಕೆ ಸಮಯವಿಲ್ಲ.—ನಾಯಿಗೆ ನರೆ ಬನ್ದರೆ ಅಜ್ಜಿ ಅನ್ನಿಸಿ ಕೊಣ್ಡೀತೇ?—ನಾಯಿಗೆ ನಾರಂಗದ ಉಪ್ಪಿನ ಕಾಯೇ?—ನಾಯಿ ತಿನ್ದ ಕಜ್ಜಾಯದ ಹಾಗೆ.—ನಾಯಿ ಬಡೀಲಿಕ್ಕೆ ಬಣ್ಣದ ಕೋಲೇ?—ನಾಯಿ ಬಲ್ಲದು, ತೊಗಲು ಬಲ್ಲದು (I do not meddle with the affair).—ನಾಯಿ ಬಲ್ಲದೆ ದೇವರ ಜಗಲಿಯ?—ನಾಯಿ ಬೊಗಳಿ, ಪಾಳ್ಯಕ್ಕೆ ಕೇಡು ತನ್ದು.—ನಾಯಿಯ ಬಾಲಾ ನಳಿಗೆಯಲ್ಲಿ ಹಾಕಿದರೆ ಡೊಂಕು ಬಿಟ್ಟೀತೇ?—ನಾಯಿ ಹಸಿದಿತ್ತು, ಹಿಟ್ಟು ಹಳಸಿತ್ತು.—ನಾಯಿಯ ಬೊಜ್ಜಕ್ಕೆ ಅಮೇಧ್ಯದ ಹೋಳಿಗೆ.—ನಾಯಿಯೆತ್ತ? ನಾಗಲೋಕವೆತ್ತ?—(the mad) ನಾಯಿ ಸಾಯೋ ವರೆಗೆ ಕಾಲು ಕೊಚಿಯದೇ?—ನಾಯಿ ಸನ್ತೆಗೆ ಹೋಗಿ, ನಳಿಗೇಲಿ ಬಡಿಸಿ ಕೊಣ್ಡಿತು.—ನಾಯಿಹುಣ್ಣಿಗೆ ಬೂದಿಯೇ ಮದ್ದು.—ನಾಯಿಯ ತಲೆಯ ಮೇಲಣ ಬುತ್ತಿಯ ಹಾಗೆ.—ಮೊಣ್ಣನ ಕೊನ್ದವನಿಲ್ಲ, ನಾಯಿಯ ತಿನ್ದವನಿಲ್ಲ.—ಜಾತಿಗೆ ಜಾತಿ ಹಗೆ, ನಾಯಿಗೆ ನಾಯಿ ಹಗೆ.—ದಣ್ಡಿಗೆಯ ಮೇಲೆ ನಾಯಿಯಾ ಕುಣ್ಡ್ರಿಸಿದರೆ ಹೇಲು ಕಣ್ಡು ಹಾಱಿತು.—ತಾಯಿಗೆ ಸೇರದ್ದು ನಾಯಿಗೂ ಸೇರದು.—ಸೋಕಿದ ನಾಯಿ ಒಡೆಯನ ಗುಱುತ ಬಲ್ಲೀತೇ (or ಬಲ್ಲದೇ)?—ಹಗೆಯದೊಳಗೆ ಬಿಪ್ಪ ನಾಯಿ ಹಾಕುವವರನ್ನಱಿಯದು, ತೆಗೆಯುವವರನ್ನಱಿಯದು (Prvs.). see Bp. 55, 25; B. 2, 4; Si. 167. 342; ಹೆಣ್ಣು-, ಹೆಬ್ಬಾರೆ-; Prvs. s. ಓಡಾಟ, ಕಜ್ಜು 1, ತಿಗಳಗಿತ್ತಿ-, ನೆಣ್ಣು, ಸೋವು, ನ್ಯಾಯ, ಪ್ರಾಯ, ಬಗುಳು 1, ಬಣ್ಣ 5, ಬಲಾತ್ಕಾರ, ಜಾಲ, ಬಾಱು 1, ಬೆಟ್ಟ 1,

ಬೊಗಳು 1, ಮುಟ್ಟು 1, ಮೊಟ್ಟೆ 1, ಲೊಲ್ಲೊಟ್ಟೆ. — ನಾಯಿಕುನ್ನಿ. = ನಾಯಿಮಱಿ. (My.). — ನಾಯಿಕೊಡೆ. a mushroom (My.). — ನಾಯಿಗೆಮ್ಮಲು. ನಾಯಿಗೆಮ್ಮು. -ಕೆಮ್ಮಲು. -ಕೆಮ್ಮು. the whooping cough (My.). — ನಾಯಿತುಲಸಿ. the herb Ocimum album L. (St. & Pl.; My.). — ನಾಯಿತೊಣಚಿ. the dog-fly (My.). — ನಾಯಿತೊಳಚಿ. = ನಾಯಿತುಲಸಿ. (My.). — ನಾಯಿತ್ಯಾಗದ ಮರ. ಫಂಜಿಕೆ, ಬ್ರಾಹ್ಮಣಿ. ಪದ್ಮೆ, ಭಾರ್ಗಿ, etc. ಎನ್ನರೆ ಬಾರಂಗಿ; ಕಿಱುದೇಗುಗಿಡವೆನ್ನು ಕೆಲವರನ್ನುವರು, ನಾಯಿತ್ಯಾಗದ ಮರ (Si. 143; My.). — ನಾಯಿನೇಱಿಳು. = ನಾಯಿನೇಱಿಳೆ. (My.). — ನಾಯಿನೇಱಿಳೆ. = ನಾಯಿನೇಱಲ್. (ನಾದೇಯಿ, ಭೂಮಿಜಮ್ಬುಕೆ Si. 130. 151; My.). — ನಾಯಿನೇಱಲ್. a kind of Eugenia tree the fruit of which is somewhat sour, perhaps Eugenia operculata, Van Someren (ನಾದೇಯಿ, ಭೂಮಿಜಮ್ಬುಕೆ Nr.). — ನಾಯಿನೊಳಲೆ. = ನಾಯ್ನೊಳಲೆ. (ಮಹೀಲತೆ, ಗಣ್ಡೂಪದ, ಕಿಂಚುಲಕ Nr. *a*; ನಾರನೊಳಲೆ Nr. *b*; ಗಣ್ಡೂಪದ, ಕಿಂಚುಲಕ Mr. 411). ಗಣ್ಡುನಾಯಿನೊಳಲೆ (ಶಿಲಿ, ಗಣ್ಡೂಪದಿ Nr. *a*). ಹೆಣ್ಣುನಾಯಿನೊಳಲೆ (ಶಿಖಿ, ಗಣ್ಡೂಪದಿ Nr. *b*). 2, a mushroom (My.). — ನಾಯಿ ಪಾಯಿ. reit. (My.). — ನಾಯಿಬೆಳೆ ಗಿಡ. an annual herb, Cleome viscosa L. (St. & Pl.). — ನಾಯಿಬೇಲ. = ನಾಯ್ಬೇಲ. the plant Flacourtia sapida R. (My.; ಸ್ವಾದು ಕಣ್ಟಕ, ವಿಕಙ್ಕತ, ವ್ಯಾಘ್ರಪಾತ್, etc. Si. 130; *cf.* ಹುಳಿಬೇಲ). — ನಾಯಿ ಮಱಿ. a puppy, a whelp (My.). ಕೇಡುಗಾಲಕ್ಕೆ ನಾಯಿಮಱಿ ಮೊಟ್ಟೆ ಇಕ್ಕಿತು (Prv.). — ನಾಯಿಯುಳ್ಳಿ. a bulbous plant, Scilla indica Roxb. (St. & Pl.). — ನಾಯಿರಾಗಿ. a grass often cultivated for its grain, Eleusine stricta Roxb. (Z.). — ನಾಯಿವಿಡು. -ಬಿಡು. to set on a dog or dogs (J. 28, 45). — ನಾಯಿಸೊಣಗುಗಿಡ. an annual plant, stinging like nettles, Mucuna pruriens D. C. (St. & Pl.).— ನಾಯಿಹಕ್ಕಱಿಕೆಗಿಡ. an annual milky plant, Sonchus oleraceus L. (Z.; My.).

**ನಾಯಿ nāyi.** (ನಾಯಿನ್). leading, guilding; master. *cf.* ನಾಯಿನಾರ್."

**ನಾಯಿಕ nāyika.** = ನಾಯಕ No. 3. a title for a man of the bēḍa caste. (My.); [a leader; a hero].

**ನಾಯಿಕೆ nāyike.** = ನಾಯಕಿ. a mistress; a wife; a noble lady (Sk.; My. as ನಾಯಿಕಿ); [a heroine].

**ನಾಯಿತನ nāyitana.** doggishness [ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನನ್ತೆನ್ನ ಬಾಳುವೆ...ಈ ನಾಯಿತನವ ಮಾಣಿಸು ಕೂಡಲ ಸಂಗಮದೇವಾ Bv. 35]; (Bh. 4, 4, 13).

**ನಾಯಿನಾರ್ nāyinār.** (fr. ನಾಯು 1 or ನಾಯಿ). = ನಯ್ಯನಾರ್, etc. see ಮೊನೆಯಿಡು-. [a Śaiva devotee. T.]

**ನಾಯಿನ್ದ nāyinda.** Tbh. of ನಾಪಿತ. (My.; Si. 339; see ನಾಪಿದ). — ನಾಯಿನ್ದಗತ್ತಿ. -ಕತ್ತಿ. a razor (My.). — ನಾಯಿನ್ದಮುಱುಕ. a broken, imbecile barber. see Prv. s. ಬಾಯ್.

**ನಾಯಿನ್ದಗಿತ್ತಿ nāyinda-gitti.** = ನಾಪಿತಿ. the wife of a barber. (My.).

**ನಾಯ್ಯ nāyya.** to be led or guided, etc. see ಆ-, ಪ್ರಣಾಯ್ಯ.

**ನಾರ್ nār.** (Śmd. 58). = ನಾರು, (ನಾರಿ). a fibre: fibres or hemp of plants, strings in mangoes and other fruits; cloth made of fibres or hemp (ತ್ವಕ್, ವಲ್ಕ, ವಲ್ಕಲ Nr.; Si. 122; My. as ನಾರು; T.; M. ನಾರ್, ನಾಱು; *cf.* ನವಿರ್?). ನಾರ್ಗಳ್ (Śmd. 51).

**ನಾರ nāra.** (fr. ನರ). relating or belonging to men, human, mortal; (a man). 2, water (*cf.* ನೀರ್). 3, a calf.

**ನಾರಕ nāraka.** (fr. ನರಕ). *relating to hell; being or abiding in hell;* hellish, infernal. 2, *an inhabitant of the infernal regions.* 3, *hell.* see Cpr. 5, 36.

**ನಾರಂಗ nāraṅga.** = ನಾಗರಂಗ, ನಾರಿಂಗ. the orange tree; an orange (especially a sour one, a citron, ಈಳೆ Kk. 71, Śm. 25, Mr. 112; ಭೂಮಿಜಮ್ಬುಕೆ, ನಾದೇಯಿ, ನಾಗರಂಗ, ಐರಾವತ Nr.; Bp. 19, 66; T. ನಾರತ್ತೈ). [Cv. 151]. ನಾಯಿಗೆ ನಾರಂಗದ ಉಪ್ಪಿನ ಕಾಯೇ? (Prv.).

**ನಾರಣ nāraṇa.** Tbh. of ನಾರಾಯಣ. Viṣṇu. (My.).— ನಾರಣಾರ್ಯ. -ಆರ್ಯ. N. (Bp. 56, 42).

**ನಾರದ nārada.** *N. of a Dēvarṣi* (ಕಲಹಾಳಿಗ Ct. I, 87; see ರವಕಾಯು: Grj. 4, 37. 38; C. Bp. 47, 15; J. 7, 26) who like Mercury appears on the earth as a messenger from the gods to men or vice versa, is considered as fond of creating quarrels for universal benefit and the inventor of the vīṇā. 2, ನಾರ-ದ, water-giving: a cloud.

**ನಾರದಪುರಾಣ nārada-purāṇa.** N. of a Purāṇa (Bp. 43, 76).

**ನಾರದವೀಣೆ nārada-vīṇe.** Nārada's lute: a kind of lute (My.).

**ನಾರಯಣ nārayaṇa.** Tbh. of ನಾರಾಯಣ. Viṣṇu. (Bh. 1, 1. 1; 2, 10 sum.).

**ನಾರಸ nārasa.** Tbh. of ನಾರಸಿಂಹ. (Te.; see ಕೊಂಕಿಯು-).

**ನಾರಸಿಂಹ nārasiṁha.** (fr. ನರಸಿಂಹ). = ನಾರಸ. referring or belonging to Viṣṇu in his man-lion avatāra; that avatāra itself; Viṣṇu. (My.; Bp. 56, 34; J. 12, 1).

**ನಾರಾ nārā.** (T. ನಾರೈ, a heron; ನಾರೈಕನ್ಱು, a lean calf). — ನಾರಾಗೋರ. a dreadfully meagre man (My.). 2, Nārā and Gōra, two sons of a Brāhmaṇa called Ajamīḍha (My.). — ನಾರಾಗೋರಿ. a dreadfully meagre woman (My.).

**ನಾರಾಚ nārāca.** = ನಾಲೀಕ. *a long iron arrow* (Bh. 3, 13, 26); an iron style to write with (ಪತ್ರಿ, ಕಣ Mr. 359).

**ನಾರಾಚಿ nārāci.** *a goldsmith's scales.*

**ನಾರಾಟ nārāṭa.** a certain musical tone (Bp. 19, 10).

**ನಾರಾಯಣ nārāyaṇa.** = ನರಯಣ, ನಾಣ, ನಾರಣ, ನಾರಯಣ. the personified puruṣa or first living being: Brahmā. 2, *Viṣṇu.* Kṛiṣṇa (ಮುರಜಿತ್ Kāvy. V, 62).

**ನಾರಾಯಣಾಸ್ತ್ರ nārāyaṇa-astra.** N. of a mystical weapon. (J. 8, 45. 49).

**ನಾರಾಯಣಿ nārāyaṇi.** = ನಾಣಿ. Lakṣmī. 2, Durgā. 3, *the plant Asparagus racemosus* Willd.

**ನಾರಿ nāri.** = ನಾರ್. (a rope, a cord); a bow-string [ಆಚಾರವೆಮ್ಬ ಬಿಲ್ಲಿಗೆ ವಿಚಾರವೆಮ್ಬ ನಾರಿ Cv. 1451]; (My.; Te.; T. ನಾಣಿ, ನಾರ್, ನಾರಿ; M. ಞಾಣ್; ತಿರು, ಬಿಲ್ಲ ಹೆದೆ Nn. 74 as Sk.; J. 6, 17; 20, 59). 2, the web which surrounds the stipes of a palm-tree branch (T.). ಬಿಲ್ಲ ನಾರಿ (ಶಿಂಜಿನಿ Nr.; ಜೀವ Nn. 517; ತಿರು, ತಿರ್ಪು Kk. 39; ತಿರು, ತಿರ್ಪು, ಹೆದೆ Śm. 43). ತಾವರೆನೂಲ ನಾರಿ (Śmd. 66. 133).

**ನಾರಿ nāri. 1.** *a woman, a wife* (ವನಿತೆ, ಸ್ತ್ರೀ Nn. 74). ನಾರಿಯಾಗಿ ಸಮ ನಡೆಯದಿಪ್ಪವಳೇ ಮಾರಿ. — ನಾರಿಯಿಲ್ಲದ ಮನೆ, ನೀರು ಇಲ್ಲದ ಊರು ನೂಱು ಬನ್ದರೂ ತಾರಕ್ಕೆ ಬೇಡ. — ನಾರೀ ಮೋಱೆ ನೋಡಿ, ಊಱು ಕೂತರೆ ನೀರು ಸಿಕ್ಕೀತೇ? [ಒಲಿದರೆ ನಾರಿ, ಮುನಿದರೆ ಮಾರಿ] (Prvs.). see Prv. s. ಬಾರು; Sp. s. ಮಾರಿ.

**ನಾರಿ na-ari. 2.** who has no enemies (ಅಜಾತಶತ್ರು, ಹಗೆಗಳಿಲ್ಲದವನು Nn. 74).

**ನಾರಿಕೇರ nārikēra.** = ನಾಡಿಕೇರ, ನಾರಿಕೇಲ, ನಾರಿಕೇಳಿ, ನಾರಿಯುಳಿ, ನಾಳಿಕೇರ, ನಾರೀಕೇಲ. *the cocoa-nut tree, Cocos nucifera; the cocoa-nut.*

**ನಾರಿಕೇಲ nārikēla.** = ನಾರಿಕೇರ. (ನಾರಿಯುಳಿ, ತೆಂಗು Mr. 112; Te. ನಾರಿಕೇಡ).

**ನಾರಿಕೇಲಿ nārikēli.** = ನಾರಿಕೇರ. (Sk.).

**ನಾರಿಂಗ nāriṅga.** = ನಾರಂಗ. the orange tree. see ನೆಲ-.

ನಾರಿಯಳಿ nāriyaḷi. = ನಾರಿಕೇರ, q. v. (Mhr. ನಾರಳ್, ನಾರಳೀ).

ನಾರಿಕೇಲ nārikēla. = ನಾರಿಕೇರ.— ನಾರೀಕೇಲಪಾಕ. a kind of rather complicated poetical composition (My.).

*ನಾರಿವಾಣ nārivāṇa. = the lime fruit? ನಾಯಿಗೆ ನಾರಿವಾಣ ಪಕ್ಕವುದೆ Bv. 31.

ನಾರು nāru. = ನಾರ್. (C.; Bp. 42, 3; 60, 49). a fibre, etc. ನಾರು ನೂಲು ಕ್ರಿಮಿಜ ರೋಮುಗಳಿಂ ಪುಟ್ಟುವುವು (ಸೀರೆಗಳ್) ನಾಲ್ಕು ತೆಜನ್ ಅಕ್ಕುಂ (Hlā.). ನಾರು ನೂಲು ಕ್ರಿಮಿಜ ರೋಮಂಗಳೆನ್ನ ನೆಯಿದ ಆ ಸೀರೆ ನಾಲ್ಕು ತೆಜನ್ ಅಕ್ಕು (Mr. 341). ಎಲೆಯ ನಾರು (ಮಾಥಿ Nr.). ಕೆಂಗಿನ ನಾರು (B. 2, 42). ನಾರು ಉಟ್ಟಾ ಕ್ಷಣ ನಾಜಿಪನಾದಾನೇ? — ಹೂವಿನಿನ್ನ ನಾರು ಸ್ವರ್ಗಕ್ಕೆ ಹೋಯಿತು. — ಹೂವಿನಿನ್ನ ನಾರು ಮಣ್ಣೆಯ ಮೇಲೆ (Prvs.). see ಕಲ್ಲು–, ಗೋಗಿ–. — ನಾರ ಮಡಿ. = ನಾರುಮಡಿ. ಚೀರ, ಛಟಿ G.; My.). — ನಾರ ಸೀರೆ. a garment made of the fibres of the bark of certain trees (ವಲ್ಕಲ Bhn. 24). — ನಾರು ಕಟ್ಟು. fibre-like pus to form in or around a sore (My.). ನಾರು ಕಟ್ಟಿದರೆ ನಾಜಿಹೋದು ಬಿಟ್ಟೀತೇ? (Prv.). — ನಾರು ಬೇರು. fibres (bark) and roots (My.). — ನಾರುಮಡಿ. cloth made of the fibres of plants (My.; T. ನಾರ್ಪಟ್ಟು; M. ನಾರ್ಪಟ್ಟು). — ನಾರುಸೀರೆ. = ನಾರ ಸೀರೆ. (ವಲ್ಕಲ, ಶಲ್ಕ Si. 407; My.). — ನಾರುಹುಣ್ಣು. the guinea-worm (ನಾಡೀವ್ರಣ Si. 200; C.; Te. ನಾರಿಕುರುಪು; Mhr., H. ನಾರೂ; Mhr. also ನಾರಾಯಣ).

ನಾರುಗ nār-uga. a man who deals in fibres (Śmd. 240).

*ನಾರುಳಿ nāruḷi. = ನಾರಿವಾಣ. ನಾರುಳಿಯ ಹಣಿವನಾರಾದರೆಯೂ ಆದರೆ? Bv. 863.

ನಾಱ nāṟa. = ನಾಱು 2. — ನಾಱವ್ವೇಳೆ. –ಂ–ಬೇಳೆ. = ನಾಱುವ ಬೇಳೆ. a strongly smelling annual herb, Cleome pentaphylla L. (or Gynandropsis p. Dec., ಪರ್ಪರೆ, ಕಪರಿ, etc., ಪಾಯಿಕ್ಟೆಚೆಟ್ಟು Si. 157; My.).

ನಾಱು nāṟu. 1. ನಾಱ್ nāṟ. to yield a smell, to smell; to stink (ಗನ್ಧ Śmd. Dh.; My.; T., M.; Tu. ನಾದು). P. p. ನಾಱು (Bp. 44, 25; My.), ನಾತು (My.). ನಾಱುವ (Bp. 40, 70). ನಾಱಿ (4. 25; 46, 58). [ಪೊಲಸು ನಾಱುವ ಮಯ್ಯನ Pb. 11, 51; Ap. 2, 43]. ನಾಱುವ ಪೂಂಸ (ವಿಸ್ರ Hlā.). ಅವುದೊನ್ದು ಹಸುಕು ನಾಱುವವುಣ್ಣು, ಅದು ವಿಸ್ರ, ಆಮಗನ್ಧ (Nr.). ದುರ್ಗನ್ಧಮಂ ಗಾಳಿ ಪೋಲ್ ತಡೆಯಲ್ ನಾಱುವೆ? (Śs. 85). ಯಾತಱ ಹೂವು ನಾಱು? ನಾತ ರದು ನಾಲವೇ? ಜಾತಿ ವಿಜಾತಿ ಎನಬೇಡ! ದೇವನೊಲಿದಾತನೇ ಜಾತ (Sp.). ಒಕ್ಕಲಿಲ್ಲದ ಊರು ಕೋಟಿತು ನಾಱುವ ನೀರು (Dp. 54). [to smell fragrantly. ಪೆರ್ಗ್ಗಾಪಿದಾಮೋದ ಸುಗನ್ಧ ಪರಿಮಳಂ ನಾರ್ಪ ತುಪ್ಪಮುಂ Vr. 78, 15]. — ನಾಱುವ ಬೇಳೆ. = ನಾಱವ್ವೇಳೆ, ನಾಱುವ್ವೇಳೆ. ನಾಬಳ್ಳಿ. (ಬರ್ಬರ, ಬಬ್ಬರ Smd. 345; ಪರ್ಪರೆ, ಕಪರಿ, ತುಂಗಿ, ಖರಪುಷ್ಪ. ಅಜ ಗನ್ಧಿಕೆ Nr.). — ನಾಱುವ ಹುಲ್ಲು. = ಕಸಗಿನ ನಟ್ಟು. (My.).

ನಾಱು nāṟu. 2. = ನಱು, (ನಾತ–, ನಾಸ, etc.). smell. — ನಾಱು ವ್ಪೇಳೆ. –ಂ–ಬೇಳೆ. = ನಾಱವ್ವೇಳೆ. — ನಾಱುವ್ವೇಳೆಮರ. a tree, wild and cultivated, Cratraeva religiosa, var. nirvala Ham. (St. & Pl.).

ನಾಱು nāṟu. 3. ನಾಱ್. = ನಾನ್ 2, etc., ನಾದು 2. to moisten, to wet (ಅಪ್ರೀಕರಣ Śmd. Dh.; T. ನನ್ಯೈ. ನಱವು, ನಱಾ, ನಱ್ಕೆ, ಱಾಳಿ, ನಾಳಿ, ನಾಟ್ಟ, palm-tree sap).

ನಾಲ್ nal. = ನಾ 2–, etc. (Śmd. 224). four. (T., Tu., M. ನಾಲ್, ನಾಲ್ಕು). [— ನಾಲ್ಚಾಸಿರ. four thousand. ನಾಲ್ಚಾಸಿರ ರಥ ಬೆರಸು Pb. 8, 89 va.]. — ನಾಲ್ದಿಂಗಳ್. –ತಿಂಗಳ್. four months (Śsv. 2, 99). — ನಾಲ್ದೆಸೆ. the four points of the compass. see Śmd 79; Bp. 5. 33; Rśv. 6, 32; J. 5, 60; 7, 41. — ನಾಲ್ದೋಳ್. –ತೋಳ್. four arms (Śsv. 1, 61). — ನಾಲ್ದೋಳ. –ತೋಳ. the four-armed one: Viṣṇu (ಉಪೇನ್ದ್ರ Śm. 6). — ನಾಲ್ನೂಱು. four hundred [ನಾಲ್ನೂಱು ಗೊಂಕುಱುಗಱ್ಯುಂ Pb. 12, 7 va.]; (B. 4, 206) ನಾಲ್ನೂಱಾ ಅಯ್ವತ್ತು (4, 117). — ನಾಲ್ಮೊಗ. the four-faced one Brahmā (ಬೊಮ್ಮ, etc., ಅಜ Ct. II, 3; ಬೊಮ್ಮ Kk. 9; ಬ್ರಹ್ಮ Śm 8). — ನಾಲ್ವಟ್ಟೆ –ಬಟ್ಟೆ. four roads, or a place where four roads meet (ಚೌಪದಿ Ct. II, 88). — ನಾಲ್ವಡಿ. –ಮಡಿ. (Śmd. 224). four folds or times; fourfold (Grj. 6, 48). ಭಾಸ್ಕರಸುತನಿಂ ನಾಲ್ವಡಿ (Śmd. 81). — ನಾಲ್ವತ್ತನೆಯ. ನಾಲ್ವತ್ತು–ಅನೆಯ. fortieth (J. 32, 37). — ನಾಲ್ವತ್ತು. –ಪತ್ತು. forty [Ap. 10, 32 va.]; (Śmd. 224). (C.). ನಾಲ್ವತ್ತು ಅಯ್ವತ್ತು (B. 3, 66). ನಾಲ್ವತ್ತಱ ಮೇಲೆ ನಡಿಕೆ (after forty years good conduct uses to begin), ಎಪ್ಪತ್ತಱ ಮೇಲೆ ಬಡಿಕೆ (Prv.). [— ನಾಲ್ವತ್ತೆಣ್ಗಾವುದ. forty-eight gāvudās. ನಾಲ್ವತ್ತೆಣ್ಗಾವುದದ ಸೀಳದ ಮೂವತ್ತಾಱು ಗಾವುದದಗಲದ ಬೀಡಿಂಗೆ Ap. 12, 68 va.; 15, 3 va.;— ನಾಲ್ವತ್ತೆರಡು. forty-two Pb. 1, 25]. ನಾಲ್ವತ್ತೆರಡೂ ಕಾಲು (4, 100). — ನಾಲ್ವತ್ತೇೞ್ (Śmd. 45). [—ನಾಲ್ವತ್ತೊಮ್ಬತ್ತು. forty-nine Ap. 4, 62]. — ನಾಲ್ವರ್, ನಾಲ್ವರು. four persons; the four persons [ಪರಪದಗ್ಗಾಗ ಪಾರ್ವಗ್ಗಾಗ್ಯತ್ತರಸರ್ಗಾಗ ಕುಡಿಯರಪ್ಪ ನಾಲ್ವಗ್ಗಾಗ ಗಳ್ Kr. 1, 65]; (Bp. 40, 71; J. 10, 44; 29, 39; B. 3, 101; My.). — ನಾಲ್ವೆರಲ್. –ಬೆರಲ್. four fingers [ನಾಲ್ವೆರಲ್ ಮೇಗು ಪೊದಬ್ದ ಚಾಗದೊಳಮೊನ್ದಿದ ಬೀರದೊಳಂ ಗುಣಾರ್ಣವಂ Pb. 1, 50; Ap. 5, 29]; (Cpr. 1, 14). ನಾಲ್ವೆರಲಸಿತಂ ಕಳೆದು (Śmd. 224). — ನಾಲ್ವೆರಳ್ –ಬೆರಳ್. ನಾಲ್ವೆರಳು (Bp. 44, 7). = ನಾಲ್ವೆರಲ್. ಗೇಣೆರಡಾಗಲ್ ಒನ್ದು ಮೊಜನಕ್ಕು, ಅದಕೆ ಮಿಕ್ಕ ನಾಲ್ವೆರಳು ಪೆಚ್ಚಲ್ಕೆ ಗಜಮಕ್ಕು (Mr. 325). ನಾಲ್ವೆರಳುದ್ದ (Bp. 57, 45). — ನಾಲ್ಸಾಸಿರ. four thousand (Abh. P 1, 67).

ನಾಲ nāla. 1. = ನಳ್ಳು, ನಾಡ, ನಾಲೆ, ನಾಳ 1, ನಾಳು, ಲಾಳ 1. (fr. ನಲ) consisting or made of reed or reeds. 2, *a hollow or tubular stalk, especially the stalk of a lotus, of a pot-herb, etc.* (ದಣ್ಟು Mr. 372; ಸಾರಸದ ದಣ್ಟು 420). 3, *any pipe or tube or tubular vessel of the body*, the windpipe, urethra, etc. 4, a handle. 5, a water-channel, a rivulet or nallah; a drain, a gutter (My.). 6, yellow orpiment (= ಅಲ, ತಾಲ).

ನಾಲ nāla. 2. = ನಾಳ 2, ಲಾದ 2, ಲಾಳ 2. a horse or bullock-shoe (My.; Br.; Mhr., H.).

ನಾಲಗಾಱ nāla-gāṟa. = ನಾಲಬನ್ದಿ No. 2. (S. Mhr.).

ನಾಲಗೆ nālage. = ನಾಲಿಗೆ. the tongue (ರಸಜ್ಞೆ, ರಸನೆ, ಜಿಹ್ವೆ Hlā., Nr.; ಜಿಹ್ವೆ, ಅರ್ಚಿಸ್ Hlā.; Bp. 49, 21; 59, 10; Mr. 277; Tu also ನಾಲಾಯಿ; T., M. ನಾ, ನಾಕ್ಕು, ನಾವು; Te. ನಾಲಿಕೆ, ನಾಲುಕೆ). [ಕನಕಳೆಯನನ್ತ ನಾಲಗೆ ಪೊರಳ್ವುದು ರಾಜಸಭಾನ್ತರಾಳದೊಳ್ Ap. 2, 11; Pb. 4, 83]. . ಉರಿಯ ನಾಲಗೆ (ಅರ್ಚಿಸ್, ಕೀಲೆ, ಜ್ವಾಲೆ, ವರ್ಚಸ್, etc.); ಹಿರಣ್ಯಕೆ, ಕನಕೆ, ರಕ್ತೆ, ಕೃಷ್ಣೆ, ಸುಪ್ರಭೆ, ಅತಿರಿಕ್ತೆ, ಬಹುರೂಪೆ ಇವು ಅಗ್ನಿಯ (ಏೞು) ನಾಲಗೆಗಳು (Hlā.). ಕೆನ್ದಳಿರ ನಾಲಗೆ (Śmd. 81). see ಎತ್ತು–, ಕಡಲ–, ಕಿಱು–, ಸಿಡಿಯ–; Prv. s. ಮಗ 1; Cpr. 1, 41; 4, 86; 5, 69. 97. — ನಾಲಗೆತೀಟ್ಟೆ. desire of the tongue (V. 8, 3 va.).

ನಾಲಬನ್ದಿ nāla-bandi. = ನಾಲುಬನ್ದಿ, ನಾಲುಬನ್ದು, ನಾಳಬನ್ದಿ, ಲಾಳಬನ್ದಿ horse or bullock shoeing (My.; Mhr., H.). 2, one who shoes horses or bullocks (My.).

ನಾಲಿ nāli. = ನಳ್ಳಿ, ನಾಡಿ, ನಾಳಿ. a hollow or tubular stalk, the stalk or culm of a plant. 2, any tubular vessel of the body; 3

tube. 3, a lotus flower. 4, an instrument for perforating an elephant's ear. 5, a period of twenty-four minutes. 6, a gong.

ನಾಲಿಕ **nālika.** a lotus flower. 2, a kind of wind instrument (R.).

ನಾಲಿಕಾಪಾತ್ರ **nālikā-pātra.** a tubular vessel (V. 9, 27).

ನಾಲಿಕೆ **nālike.** ನಾಲಿಕಾ. a stalk, a tube.

ನಾಲಿಗೆ **nālige.** = ನಾಲಗೆ. (ರಸಜ್ಞೆ, etc. Mr. 318; Si. 214; C.). ನಾಲಿಗೆಯ ಬುಡಂ (ಜಿಹ್ವಾಮೂಲಂ Śmd. 43 Cm.). ತನುವಾದ್ಯಂ, ನಾಲಿಗೆ ನಾದನದಣ್ಡಂ (45, o. r. ನಾಲಗೆ). ನಾಲಿಗೆ ಬಾಚಿಸುವ ಕುಡುಹು (46, o. r. ನಾಲಗೆ). ನಾಲಿಗೆಯಲ್ಲಿ ಸವಿಹ (ರಸ Nr.). ಹಲ್ಲು ನಾಲಿಗೆಯಿಲ್ಲ, ಸೊಲ್ಲು ಸೋಜಿಗವಲ್ಲ, ಕೊಲ್ಲದೆ ಪ್ರಾಣಿಗಳ ಹಿಡಿಯುವುದು (a net, Sp.). ಕಣ್ಣು ಮನ ನಾಲಿಗೆಯು ತನ್ನದೆನ್ದೆನ ಬೇಡ! ಅನ್ಯರು ಕೊನ್ದರೆನ ಬೇಡ! ಇವು ಮೂಱು ತನ್ನ ಕೊಲ್ಲುವವು (Sp.). ನಾಲಿಗೆಯಿಲ್ಲದವನು ನಾರಾಯಣ ಅನ್ನಾನೇ? — ನಾಲಿಗೆಯಿಲ್ಲದಿದ್ದರೆ ಕಾಲಿಗೆ ಬಡತನವೇ? — ನಾಲಿಗೆ ಒಳ್ಳೇದಾದರೆ ನಾಡೆಲ್ಲ ಒಳ್ಳೇದು (Prvs.). see Bp. 18, 60; 38, 19; 60, 28; B. 3, 60; 4, 48; 5, 71; Prv. s. ಬೆಂಕಿ; ಉರಿ–, ಎತ್ತು–, ಏಱು–, ಕಡಲ–, ಕೆನ್–, ತುದಿ–, ಪುಚ್ಚೆ–; Prv. s. ಬಟ್ಟೆ2. 2, the tongue or clapper of a bell (My.). — ನಾಲಿಗೆಕಲ್ಲು. a projecting stone-slab (My.). — ನಾಲಿಗೆ ಕೆಡು. the tongue to be diseased so that it has no taste for any thing (My.). 2, a promise to fail (My.). — ನಾಲಿಗೆಗೂಟ. the right-hand leg of a weaver's web beam (R.). — ನಾಲಿಗೆ ತಪ್ಪು. a promise to fail. ನಾಲಿಗೆ ತಪ್ಪಿದವನು ನಾಯಿಗಿನ್ತ ಕಡೆ (Prv.). — ನಾಲಿಗೆ ತಿರುಗು. the tongue to turn round well: to be able to speak fluently or properly. ಅವನ or ಅವನಿಗೆ ನಾಲಿಗೆ ತಿರುಗುವದಿಲ್ಲ (My.). — ನಾಲಿಗೆಪ್ರಮಾಣ. confidence derived from or placed in (another's) words or promise (My.). — ನಾಲಿಗೆ ಬೀಳು. the tongue to lose its power or become unable to speak (My.). — ನಾಲಿಗೆಯುಳಿಸು. to keep one's promise (My.). — ನಾಲಿಗೆವಾಸಿ. trustworthiness, faithfulness in fulfilling a promise (My.). ನಾಲಿಗೆ ವಾಸಿಯಿದ್ದವನ ಮಾತು ಹಾಲಿಗಿನ್ತ ಹೆಚ್ಚು (Prv.). — ನಾಲಿಗೆ ಹೋಗು. a promise to fail (My.). 2, the tongue to be unable to speak (My.).

ನಾಲೀಕ **nālīka.** = ನಾರಾಚ. a long iron arrow; a dart, a javelin, a pike. 2, the fibrous stalk of the lotus; a lotus.

ನಾಲೀಜಂಘ **nālī-jangha.** having stalk-like legs: a raven, the carrion crow; a monkey (Rśv. 9, 29).

ನಾಲುಕು **nāluku.** = ನಾ2–, etc. four (Ch. vs. 320. 338; My.).

ನಾಲುಬನ್ದಿ **nālu-bandi.** = ನಾಲಬನ್ದಿ. horse or bullock shoeing. (My.).

ನಾಲುಬನ್ದು **nālu-bandu.** = ನಾಲಬನ್ದಿ. (My.).

ನಾಲೆ **nāle.** *the hollow or tubular stalk of a plant.* 2, = ನಾಲ1 No. 5. (My.; Mhr., H. ನಾಲಾ). ನಾಲೆಯಿಲ್ಲದ ಊರೂ ಪಾಲೆಯಿಲ್ಲದ ಪ್ರಸ್ತವೂ ಒನ್ದೇ (Prv.).

ನಾಲ್ಕು **nālku.** = ನಾಲುಕು, etc. (Śmd. 224). the state of being four; four (C.; Te. ನಾಲುಗು; M. ನಾಂಗು; T. ನಾನ್ಗು), occasionally used indefinitely (*cf.* the English "half a dozen"), and in the sense of "all". [ನಾಲ್ಕಕ್ಕುಮಿಲ್ಲಿ ಕೃತಿದೋಷಂಗಳ್ Kr. 1, 62; Pb. 3, 83 va.; Ap. 1, 39]. ತೋಳ್ ನಾಲ್ಕುಂ ಕರೆನ್ ಎಸೆದಿರ್ಕುಂ ಪದ್ಮೋದರಂಗೆ (Śmd. 18). ಅದು ನಾಲ್ಕುಂ ಭೇದವನಾಳ್ದಿರ್ಕುಂ (155). ಒನ್ದು ನಾಲ್ಕು or ಒನ್ದು ನಾಲ್ಕುಗಳ್ (170). ನಾಲ್ಕು ರೂಪಂ (279). ನಾಲ್ಕಱ (Bp. 21, 27); ನಾಲ್ಕಱಲ್ಲಿ (Śmd. 32 Cm.); ನಾಲ್ಕಱಿಂ (135); ನಾಲ್ಕಱಲಿ (Bp. 35, 32); ನಾಲ್ಕರ್ಕೆ (Śmd. 224). ನಾಲ್ಕಕ್ಕೆ, ನಾಲ್ಕಕೆ (My.), ನಾಲ್ಕನು, ನಾಲ್ಕನ್ನು (My.). ಬೆಲ್ಲವಿದ್ದ ಕಡೆ ನೊಣ, ಪಡೆ ನಾಲ್ಕಕ್ಕೆ ಪೋಣ (Prv.). ಚತುರ್ವರ್ಗವೆನ್ದು ಮೋಕ್ಷದೊಡಗೂಡಿದ ಧರ್ಮಕಾಮ ಅರ್ಥಗಳು ನಾಲ್ಕಕ್ಕೂ ಒನ್ದೇ ಹೆಸರು (Si. 255). ನಾಲ್ಕು ಭಾಗದೊಳಗೆ ಒನ್ದು ಭಾಗ ನೀರ ಬೆರೆಸಿದ ಮಜ್ಜಿಗೆ (ತಕ್ರ Nr.). ತತ ಮುರಜ ಸುಷಿರ ಘನಗಳ್ ಎನ್ದು ನಾಲ್ಕು ವಾದ್ಯಗಳಿಗೂ ಪೆಸರು (Si. 62). see Śmd. 32. 44; Bp. 40, 73; J. 4, 2; ಅಮ್ಬುಧಿ, ಯುಗ, ಶ್ರುತಿ; Si. 256. — ನಾಲ್ಕಡಿ. -ಅಡಿ. four feet (Bp. 2, 5; J. 11, 2). ನಾಲ್ಕಡಿಯವೆಲ್ಲಂ ಪಶುಗಳಕ್ಕು (Mr. 186). — ನಾಲ್ಕನೆಯ. -ಅನೆಯ. fourth (J. 18, 26). ದೊರೆಕೊಳ್ಳುಂ ನಾಲ್ಕನೆಯಕ್ಕರದ ಅತ್ವಕ್ಕೆ ಒತ್ವವೃತ್ತಿ (Śmd. 374). ತೂಪ್ರಸಂ ನಾಲ್ಕನೆಯ ವರ್ಣಮೆಮ್ಬುದು (Hlā.). ನಾಲ್ಕನೆಯವನು (My.). ನಾಲ್ಕನೆಯವನೊಬ್ಬ (B. 3, 71). — ನಾಲ್ಕಯ್ದುಂ. -ಅಯ್ದುಂ. nine (Bp. 5, 64). — ನಾಲ್ಕಷ್ಟು. -ಅಷ್ಟು. four times as much or many (My.); so much or many as four (B. 4, 117; My.). — ನಾಲ್ಕಾಱು. -ಆಱು. four or six: several, some (B. 2, 18; 4, 19. 43; My.). — ನಾಲ್ಕು ಆಶ್ರಮ. the four periods in the religious life of a Brāhmaṇa. ಬ್ರಹ್ಮಚಾರಿ ಮೊದಲಾದ ನಾಲ್ಕು ಆಶ್ರಮಂ ವೇದದಲ್ಲಿ ಪೇಳೆ ಪಟ್ಟುವು (Hlā.). ಬ್ರಾಹ್ಮಣನೊಳ್ ಅಕ್ಕುನೆಗಟ್ದ ಬ್ರಹ್ಮಚಾರಿ ಗೃಹಸ್ಥ ವಾನಪ್ರಸ್ಥ ಯತಿ ಎನಿಪ್ಪ ನಾಲ್ಕಾಶ್ರಮಂಗಳ್ (Mr. 249). — ನಾಲ್ಕುಂ1. -ಉಂ1 = ನಾಲ್ಕೂ. (Cpr. 5, 76 va.). — ನಾಲ್ಕು ಕೆಲಸ. every kind of work; many kinds of work (My.). — ನಾಲ್ಕುಗಣ್ಟೇ ಹೂ. the four-o'clock flower or marvel of Peru, Mirabilis jalappa L. (St. & Pl.). — ನಾಲ್ಕು ಜನ. four persons; all persons, every body (My.). — ನಾಲ್ಕು ಜಾತಿ. = ನಾಲ್ಕು ವರ್ಣ. the four castes: Brāhmaṇa, etc. (Si. 27). — ನಾಲ್ಕು ಜಾವ. four periods or watches of three hours (Bp. 43, 25). — ನಾಲ್ಕು ದಿಕ್ಕು. the four points of the compass (My.). — ನಾಲ್ಕು ದಿವಸ. four days; some days (My.). — ನಾಲ್ಕು ದೆಸೆ. = ನಾಲ್ಕು ದಿಕ್ಕು. (Bp. 24, 35; 43, 10). — ನಾಲ್ಕು ನೀರ್. the bath taken on the fourth day of menstruation (Abh. P. 15, 62; My.). — ನಾಲ್ಕು ನೂಱು. four hundred (B. 4, 80. 98; My.). — ನಾಲ್ಕು ಬೀದಿ. four streets that form a square (My.). — ನಾಲ್ಕು ಮಾಡು. to divide into four parts (My.). — ನಾಲ್ಕು ಮಾತು. four words; some words (My.; B. 4, 56). — ನಾಲ್ಕು ಮುಕ್ತಿ. the four kinds of final beatitude: sālōkya, sāmīpya, sārūpya, sāyujya (Bp. 24, 18). — ನಾಲ್ಕು ರಸ. the four principal tastes. ಕಟ್ (ಕಟು), ತಿಕ್ತ, ಅಮ್ಲ, ಕಷಾಯ ಅನ್ದರೆ ಕಾರ, ಕಹಿ, ಹುಳಿ, ಒಗರುಗಳೆಮ್ಬ ನಾಲ್ಕು ರಸಂಗಳು (Nn. 119). — ನಾಲ್ಕು ಲಕ್ಷ. four lacs (Bp. 22, 52). — ನಾಲ್ಕುವರೆ. ನಾಲ್ಕುಂ-ಅರೆ. four and a half (My.; B. 4, 191). — ನಾಲ್ಕು ವರ್ಣ. = ನಾಲ್ಕು ಜಾತಿ. ನಾಲ್ಕು ವರ್ಣಂಗಳೊಳು ಬ್ರಾಹ್ಮಣಂ ಕ್ಷತ್ರಿಯಂ ವೈಶ್ಯನ್ ಎನ್ದು ಈ ಮೂಱು ವರ್ಣಂ ದ್ವಿಜಾಖ್ಯ ಮಕ್ಕುಂ; ತೋರ್ಕು ನಾಲ್ಕನೆಯ ವರ್ಣಂ ಶೂದ್ರಗೆ; ಅವನಿನ್ದಲಕ್ಕು ಅನ್ತ್ಯ ಜಾತಿಭೇದಂಗಳ್ (Mr. 248. 249). — ನಾಲ್ಕೂ. -ಊ7. = ನಾಲ್ಕುಂ. even the four, all the four (My.). ನಾಲ್ಕೂ ಕಡೆ (B. 4, 57. 98; B. 5, 62. 162). ನಾಲ್ಕೂ ಕಾಲು (3, 123). 2, all. ನಾಲ್ಕೂ ಜನರು (B. 5, 192; My.). — ನಾಲ್ಕೂ ಕಾಲು. also: 4¼ (My.). — ನಾಲ್ಕೆಣ್ಟು. -ಎಣ್ಟು. four or eight, from four to eight (My.); some (My.). ನಾಟಿನ ಅಣ್ಣಿಗಳು ನಾಲ್ಕೆಣ್ಟು ದಿವಸದಲ್ಲೆ ನೆಲೆಗೊಳ್ಳುವವು (Prv.). see B. 2, 34; 3, 29. 40.

ನಾಲ್ವರು **nālvaru.** four persons. see s. ನಾಲ್.

ನಾವ **nāva.** = ನಾ, ನಾವು, ನಾವೆ. a boat, a ship, a vessel.

ನಾವದಿಗೆ **nāvadige.** (Tbh. of ನಾಪಿತ್ಯ. the trade or business of a barber?). — ನಾವದಿಗೆಯೂರ್. N. (Bp. 57, 57). — ನಾವದಿಗೆಪುರ. N. (Bp. 57, 64).

**ಪೇಟಕ pēṭaka.** = ಪಿಟಕ, ಪೇಟಕೆ, etc. *a basket; a box, a chest.* 2, *a multitude, a company.* 3, an attendant (Cpr. 5, 76 va.).

**ಪೇಟಣೆ pēṭaṇe.** = ಪೇಟ 2. a turban (Rśv. 13, 72).

**ಪೇಟಾರಿ pēṭāri.** = ಪೆಟಾರಿ. a large box (My.).

**ಪೇಟಿ pēṭi.** 1. = ಪೆಟ್ಟಿ. *a basket; a chest.*

**ಪೇಟಿ pēṭi.** 2. (ಪೇಠಿ). = ಪೇಟು. ornamental work woven in the borders of cloth (My.; B. 3, 103).

**ಪೇಟಿಕೆ pēṭike.** = ಪೇಟಕ, ಪೆಟ್ಟಿಗೆ (Śmd. 338), etc., ಪೇಳಿಗೆ (Śmd. 31), etc.

**ಪೇಟು pēṭu.** = ಪೇಟ 2. (My.).

**ಪೇಟೆ pēṭe.** 1. = ಪೇಟ 1, (ಪೇಳೆ). *a basket; a chest, a box.*

**ಪೇಟೆ pēṭe.** 2. a pettah, an emporium, a mart, a market town; a place of sale, a long street of shops in a town (ಮಾಱುವ ಠಾವು Mr. 350; My.; Tu. ಪೇಣ್ಟೆ; Te., M.; T. ಪೇಟ್ಟೈ; Mhr., H. ಪೇಠ, ಪೇಣ್ಠ). ಪೇಟೆಗೆ ಜಟ್ಟಿ, ಪಟ್ಟಕ್ಕೆ ಸೆಟ್ಟಿ. — ಪೇಟೆಯಲ್ಲಿರುವವಗೆ ಬೇಟೆಯ ಸುದ್ದಿ ಯಾಕೆ? — ಪೇಟೆಗೆ ಹೋದರೆ ಸಾಲಗಾಱರ ಕಾಟ, ಮನೆಗೆ ಬನ್ದರೆ ಹೆಣ್ಡತಿಯ ಕಾಟ (Prvs.). ತರಗಿನ ಪೇಟೆ (ವಿಪಣಿ, ಪಣ್ಯವೀಥಿಕೆ Si. 106).

**ಪೇಠಿಕೆ pēṭhike.** probably a wrong reading of ಪೀಠಿಕೆ (see ಪೀಟಿಾಗೆ).

**ಪೇಡ pēḍa.** = ಪೇಡೆ. a sweetmeat composed of milk and sugar (My.; Mhr., H. ಪೇಢಾ).

***ಪೇಡಿ pēḍi.** = ಹೇಡಿ. a coward. ಗೋವಳಿಗನಂ ಗೆಡೆಗೊಣ್ಡು ಮುಮ್ಮುಳಿದೊಟ್ಟ ಪೇಡಿಯ Pb. 11, 14. Tu. ಹೇಡಿ.

**ಪೇಡೆ pēḍe.** = ಪೇಡ. ಪೇಡೇ ಬರ್ಫ. a snow-cake (B. 3, 101).

**ಪೇಣಿ pēṇi.** (*cf.* ಫೇನ). frothy scum; rice-flour, etc. beaten up to a frothy consistence (V. 9, 78; My.; Mhr. ಫೇಣೀ).

**ಪೇಣ್ಟೆ pēṇṭe.** = ಪೇಟೆ 2. a market town. [Tu.].

**ಪೇತ pēta.** Tbh. of ಪ್ರೇತ. a dead body. see ನರ-.

**ಪೇತು pētu.** confusion or distraction of mind (T. ಪೇದು): a demon (My.; see ಪೇ 1).

**ಪೇದಾ pēdā.** = ಪೇದೆ. — ಪೇದಾಮಾತು. checkmate with a pawn (My.; Mhr., H. ಪ್ಯಾದೇಮಾತ).

**ಪೇದೆ pēde.** = ಪ್ಯಾದೆ. a foot-soldier; a peon; a pawn at chess Tu.; (Te. ಪೇದಾ, ಪ್ಯಾದಾ; Mhr., H. ಪ್ಯಾದಾ, ಪ್ಯಾದೇಂ).

**ಪೇನ್ pēn.** 1. lice to increase or grow greatly (ಯೂಕ ಸಮ್ವೃದ್ಧಿ Śmd. Dh.). P. ps. ಪೇಣ್ತು, ಪೇಣ್ದು (287 Cm.).

**ಪೇನ್ pēn.** 2. = ಹೇನ್, ಹೇನು (Śmd. 59). a louse. (Tu.; T., M.; Te. ಪೇನು).

**ಪೇನ pēna.** Tbh. of ಫೇನ. foam. (Śmd. 338).

**ಪೇನಾಱಿ pēnāṟi.** the poon tree. see s. ಪೇ 2.

**ಪೇಪೀಯಮಾನ pēpīyamāna.** drinking repeatedly. (Cpr. 1, 135).

**ಪೇಯ pēya.** to be drunk, drinkable, potable; tastable, sapid; a drink, a beverage; a libation. see Ch. v. 73; ವಾಜ-.

**ಪೇಯೂಷ pēyūṣa.** = ಪೀಯೂಷ. *the milk of a cow,* etc. etc.

**ಪೇರ್ pēr.** = ಪೆರ್ 1– (before *vowels*, Śmd. 213. 214), etc., ಹೇರ್. largeness, etc. (T., M.; Te. ಪೇರು). — ಪೇರಡಗು. -ಅಡಗು. excessive, much flesh (V. 28, 71). — ಪೇರಡವಿ. -ಅಡವಿ. (Śmd. 214). a large forest or jungle (Bp. 18, 9; 26, 33; Śśv. 3, 28 va.; J. 12, 15). — ಪೇರಡಿ. -ಅಡಿ. (Śmd. 214). a long foot. 2. the long-paced one: a dog (ಸೊಣಗ, ಜಾಯಿಲ, ಕುಕ್ಕುರ, ಶುನಿ Ss.; ಸೊಣಗ Ct. II, 59, originally ಪೇರಣಿ; Rśv. 5, 52; 5, 85 va.; V. 14, 81 va. — ಪೇರಣಿ. -ಅಣಿ. a large array (Cpr. 6, 35). — ಪೇರಱಿಕೆ. -ಅಱಿಕೆ. extensive knowledge (Cpr. 5, 86). — ಪೇರಬಿರ್. -ಅಬಿರ್. a large water-fall (Abh. P. 7, 31). [— ಪೇರವಿರ್. -ಅವಿರ್. = ಪೇರಬಿರ್. ಬಿಸುನೆತ್ತರಬಿರ್ಗಳುರ್ವಿ ಪಾಯೆ ಪೇರವಿರ್ಗಳ್ಪೆರಸು ಜಾಜಿನ ಪರ್ವತಂಗಳನ್ತೆ ಕೆಡೆಪಟ್ಟು ತಟ್ಟುದಾಗಳ್ Pb. 10, 96 va.]. — ಪೇರಾನೆ. -ಆನೆ. (Śmd. 214). a large elephant [ರೌದ್ರಮಪ್ಪ ಬಿಳಿಯ ಪೇರಾನೆಯಾಗಿ ಪುಟ್ಟಿ ಬಟ್ಟೆಯೊಳ್ ಪೋಪ ಬರ್ಪ ಜನಂಗಳನೆಟ್ಟಿಟ್ಟಿ ಕೊಲುತ್ತುಂ Vr. 156, 19]; (Cpr. 5, 39 va.; 7, 81 va.). — ಪೇರಾಲ. -ಆಲ. a large banyan tree (Rśv. 9, 24). — ಪೇರಾಮೆ. -ಆಮೆ. a large tortoise (Cpr. 5, 39 va.). — ಪೇರಾಳ್. -ಆಳ್. a great soldier [ಈರಯ್ದು ಸ್ತ್ರದಿನ್ದೆಚ್ಚು ಖಣ್ಡಿಸಿ ಪೇರಾಳ್ ತಿಱಿದಿಕ್ಕಿದನ್ತೆ ತಲೆಯಂ ಪೋಗೆಚ್ಚನಾಶ್ವೇತನಾ Pb. 10, 123]; (Abh. P. 13, 120). — ಪೇರಿಳೆ. -ಇಳೆ. a large kind of orange tree (Rśv. 2, 36; *cf.* ಹೇರಳೆ). — ಪೇರುಜ್ಜುಗ. -ಉಜ್ಜುಗ. a grand business or profession (ಉದ್ಯೋಗ Ct. I, 16). — ಪೇರುರ. -ಉರ. a large, broad chest (Mr. 283; Abh. P. 3, 157; 11, 1; Bp. 18, 58; Bh. 3, 13, 33; J. 11, 41; Śśv. 4, 59). — ಪೇರುರಿ. -ಉರಿ. a great flame or blaze (ದಳ್ಳುರಿ, ಘನಜ್ವಲಿತ Śm. 11; Bp. 19, 57; 58, 28; V. 9, 21 va.). — ಪೇರುಲ್ಲಾಸ. -ಉಲ್ಲಾಸ. great sport; great delight (Bp. 23, 25). — ಪೇರುಸುರ್. -ಉಸುರ್. excessive, strong breath (Bp. 54, 40). — ಪೇರೆತ್ತು. -ಎತ್ತು. a large ox (C. Bp. 47, 40). — ಪೇರೆಲೆ. -ಎಲೆ. a large leaf (Bp. 18, 31). — ಪೇರೆಟ್ಟು. -ಎಟ್ಟು. = ಪೇರೆತ್ತು. (V. 38, 69). — ಪೇರೊಕ್ಕಲ್. -ಒಕ್ಕಲ್. (Śmd. 214). a great farmer. [— ಪೇರೊಟ್ಟೆ. -ಒಟ್ಟೆ. a big camel ಆ ಮೊಲಂ ದ್ರುಪದನುಂ ಪೇರೊಟ್ಟೆಯುಮಾ ಮತ್ಸ್ಯನುಂ ಗಡಂ Pb. 10, 4]. — ಪೇರೊಡಲ್. -ಒಡಲ್. a large belly [ಮಿಳಿರ್ವುರಿಗೇಸಂ ಪೇರೊಡಲೆಸೆದಿರೆ ಪುಟ್ಟಿದಂ Pb. 3, 20]; (J. 16, 35). — ಪೇರೊಸಗೆ. -ಒಸಗೆ. a great festivity (Rśv. 4, 42). — ಪೇರೋಟೆ. -ಓಟ. a great run (Bp. 26, 32; 57, 44). — ಪೇರೋಲಗ. -ಓಲಗ. a large assembly, a great audience, etc. (Bp. 1, 51). ಪೇರೋಲಗಂಗೊಡು. -ಓಲಗ-ಂ-ಕೊಡು. to hold a grand levee, etc. (38, 10).

**ಪೇರಣಿ pēraṇi.** = ಪೇರಣೆ. dancing, skipping (Te., also ಪೇರವಣಿ; ಪೇರೆ, course, pace, running, gallop; Mhr. ಫೇರ, ಫೇರಾ, turning round in a ring, or galloping up and down, as a horse; forming a ring and dancing and capering; *cf.* ಪೇರಿ); a sword-dance (My.).

**ಪೇರಣಿಗ pēraṇiga.** a dancer, an actor (ಕುಶೀಲವ, ಚಾರಣ Nr.).

**ಪೇರಣೆ pēraṇe.** = ಪೇರಣಿ. dancing (Bp. 4, 7; 5, 42).

**ಪೇರಲ pērala.** = ಪೇರಳ, ಪೇಲ್ರ್. (fr. dutch *peer* or portuguese *pêra*, a pear). the guava, Psidium guyava Lin. (B. 3, 20. 114; M. ಪೇರೆ, ಪೇಟ್; Mhr. ಪೇರೂ; *cf.* ಬಿಕ್ಕೆ).

**ಪೇರಳ pēraḷa.** = ಪೇರಲ. (St. & Pl.; Z.).

**ಪೇರಿ pēri.** galloping, running, as men, horses, etc. (My.; see ಪೇರಣಿ). ಕುದುರೆಯ ಪೇರಿ (ವಯ್ಯಾಳಿ G.; Cb.).

***ಪೇರಿಸು pērisu.** ? ಕೂರಿದುವಪ್ಪ ಕಣ್ಮಲರ್ಗಳಳ್ಳಿರ್ದೆಯೊಳ್ ತಡಮಾಡೆ ತಾಮ ಕಣ್ ಪೇರಿಸೆ ಪುರ್ವು ನಾಲಗೆವೊಲಾಗೆ ಮನಮ್ಮುಗಿಸಲ್ಕೆ ಬಲ್ಲೊಡಾ ಜಾರೆಯ ಜಾರೆ Pb. 4, 83.

**ಪೇರು pēru.** = ಏರು. difference or unevenness in scales (My.; Mhr. ಫೇರ). — ಪೇರು ಕಟ್ಟು. to stop, *i. e.* to remove, that unevenness (My.). *cf.* ಏರುಪೇರು.

**ಪೇಱಿಸು pēṟisu.** 1. to cause to display or be covered with. see ತಳಿವೇಱಿಸು.

**ಪೇಱಿಸು pēṟisu.** 2. = ಹೇಱಿಸು. to cause to load, etc. (J. 4, 67).

**ಪೇಱು pēṟu. 1.** = ಪೀಱ್ (ಪೀಱು), ಹೇಱು 3. P. p. ಪೇಱಿ. to scatter about (Cpr. 7, 55; Bp. 36, 28; C. Bp. 31, 4). to spread about, to unfold, to display (6, 72).

**ಪೇಱು pēṟu 2.** = ಹೇಱು 1. to lift up and put upon; to load, to lade, to freight; to pile up (J. 15, 43; M.). P. p. ಪೇಱಿ. [ಬಲದ ಕೋಡ ಮೇಲೆ ಕೆಯ್ಯಂ ಪೇಱಿ Pb. 9, 95 va.; Ap. 12, 59; Vr. 6, 8]. ನೂಱು ವಿಧದ ಪದಾರ್ಥಗಳ ಬಾಸಣಿಸಿ, ವಿವರದೊಳು ಬೇಱೆ ಬೇಱೆ ಕಪ್ಪಿಗಳೊಳಗೆ ಪೇಱಿ (Bp. 6, 32). ಪೇಱೆ ಮಹಿಮೆಗಳ (36; 28). ಸಾಲಿಗರ್ ಕಲುಗುಣ್ಡಂ ಮಿಗೆ ಪೇಱುವರ್ (Śś. in B. 5, 87).

**ಪೇಱು pēṟu. 3.** = ಹೇಱ್, ಹೇಱು 2. a load, especially a bullock-load [ಬಳೆಯ ಪೇಱಿನಾನೆ ಮುಟ್ಟಿದನ್ತೆ ನುರ್ಚುನೂಱಿಪ್ಪಿನಮ ವುಂಕಿ ಪಿಡಿದು Pb. 8, 76 va.; Vr. 187, 21]; (J. 5, 13).

**ಪೇರ್ಲೆ pērle.** = ಪೇರಲ, etc. guava fruit. (My.).

**ಪೇಲ್ pēl. 1.** = ಹೇಲು 1. to void excrements (especially used of men and carnivorous animals, ಮಲವಿಸರ್ಜನ Śmu Dh.; T. ಪೇಲು; see ಪೀ).

**ಪೇಲ್ pēl. 2.** = ಹೇಲು 2. excrement, the dung of man, dogs, cats, etc. (ಮಲ Śmd. Dh.).

**ಪೇಲ pēla.** going. 2, a small part. 3, a testicle. 4, = ಪೇಲವ. see ಪರಿ-.

**ಪೇಲವ pēlava.** *delicate, fine, soft, tender, thin, slender, small.* see ಪರಿ-.

**ಪೇಲೆ pēle.** a cup, a bowl (My.; B. 4, 125. 225; Mhr., H. ಪೇಲಾ).

**ಪೇವಡಿ pēvaḍi.** a kind of yellow paint (S. Mhr.; Mhr.).

**ಪೇಶಲ pēśala.** *beautiful, charming.* 2, *skilful, dexterous, clever; deceitful, crafty.*

**ಪೇಶವೆ pēśave.** = ಪೇಷ್ವ. the Peṣwā, the head minister of the Mahratha empire (B. 4, 216; Mhr., H. ಪೇಶವಾ).

**ಪೇಶಿ pēśi.** a piece of flesh or meat; etc. 2, an egg (ಕೋಶ, ಅಣ್ಡ, ತತ್ತಿ Mr. 167).

**ಪೇಶೀಕೋಶ pēśī-kōśa.** *an egg.*

**ಪೇಷಣ pēṣaṇa.** pounding, grinding, crushing, triturating, pulverizing by means of a mill. see ಅರೆ. 2, (ಪೇಷಣೆ G.), a hand-mill. — ಪೇಷಣಂಗೆಯ್. -ಂ-ಗೆಯ್. to grind, to mill. ಪೇಷಣಂಗೆಯ್ವ ಶಿಲೆ (ಕನ್ದ Śm. 98).

**ಪೇಷಣಾಗ್ರಶಿಲೆ pēṣaṇa-agra-śile.** the top-stone in grinding. see ಕನ್ದ.

**ಪೇಷ್ಕಷು pēṣkaṣu.** tribute paid by a zemindar, etc. (My.; Br., H.).

**ಪೇಷ್ಕಾರ pēṣkāra.** a revenue officer secondary to an Amaldāra (My.; Br., H.).

**ಪೇಷ್ವ pēṣva.** = ಪೇಶವೆ. (My.).

**ಪೇಸಿಕೆ pēsike.** = ಹೇಸಿಕೆ. aversion, disgust; nastiness (Bh. 1, 4, 42).

**ಪೇಸು pēsu. 1.** = ಹೇಸು 1. to feel aversion [ಪೇಸದೆ ದುರ್ಜನರೊಳಾದ ಪರಿಚಯಂ ಮಾಸಿಸಿ ಕಿಡಿಸುವವೊಲೊಪ್ಪುವ ಕುಲವಧುವಂ Kr. 1, 112; Pb. 4, 92; Ap. 3, 34 va.]; (Abh. P. 4, 81; 8, 52). [—ಪೇಸೆಪಡು. to make others to feel an aversion. ಆತನ ವಾದಿ ವಿನಯ ಮತಿಯೆನ್ಬೊಳ್ ಗುಜ್ಜೆ ವಿರಳದನ್ತೆ ಅದಮಾನುಂ ವಿರೂಪೆ ಪೇಸೆಪಡುವಳ್ Vr. 106, 22].

**ಪೇಸು pēsu. 2.** = ಹೇಸು 2. aversion, disgust. [T. ಪೇಯ್ devil, evil, etc.]. — ಪೇಸ್ಏೞ್. -ಏೞ್. disgust to arise (Abh. P. 11, 132 va.; 13. 96; 15, 56 va.).

**ಪೇೞಿ pēḷi.** = ಪೇೞಾ ?. (Śmd. 39).

**ಪೇೞಿಗೆ pēḷige.** = ಪೆಡಗೆ, etc. Tbh. of ಪೇಟಿಕೆ. a box. (Śmd. 31; ಪೆಟ್ಟಿಗೆ Ct. II, 13; V. 8, 4. 16). — ಪೇೞಿಗೆದೀವು. -ತೀವು. to be filled into a box (V. 8, 3).

**ಪೇೞಿಸು pēḷisu.** (Śmd. 40).

**ಪೇೞೆ pēḷe.** Tbh. of ಪೇಟಿ 1. a basket, etc. (Cpr. 6, 35).

**ಪೇೞ್ pēḷ.** = ಪೇೞು, ಹೇೞು. to utter, to say, to speak; to mention; to adduce; to narrate, to relate; to tell; to command, to order (ನಿರೂಪಿಸು Śmd. I; ಎನ್ Śmd. 20. 24 Cm.; T., M. ಪೇಱು; Te. ಪೇಲು, ಪ್ರೇಲು, M. ಪೇಱು, to chatter, as birds; T. ಏವು, M. ಏಗು, to order, command). P. p. ಪೇೞ್ದು. [ವಿಕಲ್ಪವಿವನಲ್ಲದಾಗದಾಗದು ಪೇೞಲ್ Kr. 1, 28; Pb. 1, 29; Ap. 1, 37]. ಶಬ್ದಶಾಸ್ತ್ರಮಂ....ಬಗೆವುಗೆ ಪೇೞ್ದಂ (Śmd. 3). ಕವಿಮಾರ್ಗಗತಸಮಾಸಮನ್ ಅವನ್ ಎನ್ನಱುವನಿತನ್ ಆಯ್ದು ಪೇೞ್ದಂ (231). ಇದಱೊಳ್ ಸಾಕಲ್ಯಸಂಜ್ಞೆ ಪೇೞುವು (are not adduced, *passive sense*) ಎನಲ್ ಬೇಡ (61). ಲಿಂಗಮೆಮ್ಬುದು ವಸ್ತುವಿನ ಕುಱುಪಂ ಪೇೞ್ವುದು (154). ತೃತೀಯೆ ಸಲೆ ಕರ್ತೃಕರಣಹೇತುಸ್ಥಿತಿಯೊಳ್ ಪೇೞಲ್ ಪಡೆಗುಂ (157). ನೆನೆದು, ಪೇೞ್ದಂ (280). ಏವೇೞ್ವೆನ್ ಅವನ ಚಾಗದ ಪೆಮ್ಪಂ? (211), ಈ ಪೇೞ್ದ ವಿಭಕ್ತಿಗಳ್ (164), ಪೇೞಲ್ಕೆ ಕೇಳ್ದಂ (278). ಚಿತ್ತರಿಸಲ್ಕೆ ವೇೞ್ ಸುವರ್ಣೋತ್ತರಮಂ! (278). ನೃಪಂ ಪೇೞಿ (164). ಉಡವೇೞ್, ಉಡಲ್ವೇೞ್, ತರವೇೞ್, ತರಲ್ವೇೞ್ (278); ತರವೇೞ್ ಸನ್ನಿಧ ವಾಜಿ ಸಾಧನಮಂ! (278 Mdb.). ತರವೇೞ್ದಂ (82). ಬ್ರಹ್ಮಚಾರಿ ಮೊದಲಾದ ನಾಲ್ಕು ಆಶ್ರಮಂ ವೇದದಲ್ಲಿ ಪೇೞ್ ಪಟ್ಟುವು (Hlā.). ಪೇೞ್ವನು (ಸೂಚಕ, ಹೇಱುವನ್ನಾವನು Nn. 122). ಪೇೞ್ವುದು (ಆಜ್ಞೆ, ಶಾಸಿತ, ಪ್ರಯೋಗ, ಶಾಸನ Mr. 440). ಅಜ್ಜಿಗೆಯೆನೆ ಇರಪನ್ನಿಗೆಯೊಳೆ ಪೇೞ್ಗು (either: they use to say, or: it is said, or explained by, Śm. 27); ಪೇೞ್ಗು ಪಿಡಿಯೆನಲ್ ಪೆಣ್ಗಾನೆ (41). ಲಿಂಗ, ಪೇೞ್! ಎನಲ್ ಬಲ್ಲರ್, ಇದನ್ ಅಂ ಪೇೞ್ದಿನು (Kk. 3). ಇವನದೇಂ ಭೀತಿಯಂ ಪೇೞ್ವಂ? (Rśv. 13, 8). ಎಲೆ, ಮುನಿಪ, ನೀ ನನ್ನಿಯನೆ ಪೇೞ್! (Bp. 1, 55). ಆ ಅಯ್ಯನ ಅಮಲಚರಿತ್ರವಂ ಪೇೞಲ್ಕೆ (60, 13). see Cpr. 1, 48. 62. 63; 3, 90; 5, 44. [ಪೇೞ್ವೊಡೆ ಪಮ್ಪನ ಪೇೞ್ಗುಮೆನ್ದು ಪಣ್ಡಿತರೆ ತಗುಳ್ದು ಬಿಚ್ಚಱುಸೆ Pb. 1, 11].

**ಪೇೞಿ pēḷi.** = ಪೇೞಿ ?.

**ಪೇೞಿಕೆ pēḷike.** = ಪೇೞಾಕೆ. saying, telling; talk, rumour. 2, a saying, an enigma, a puzzle, a sort of citra (Kāvy. III, 2, B, 81; *cf.* ಪ್ರಹೇಳಿಕೆ).

**ಪೇೞಿಗೆ pēḷige.** = ಪೇೞಾಕೆ. saying, etc. 2, fame. ನೀನು ಲ್ಕೊಡುಣ್ಬು ರಾಜ್ಯಂ; ನೀನುಲ್ಕೊಡೆ ಪಟ್ಟಮುಣ್ಬು, ಪೇೞಿಗೆಯುಣ್ಬು (Śmd. 155. 292; it is possible that here the term is ಪೇೞಿಗೆ, *i. e.* boxes with money, etc.).

**ಪೇೞಿಸು pēḷisu.** = ಹೇೞಿಸು. to cause to tell, etc. [ತ್ರಿದಶಸ್ತುತ್ಯಮಿದಾದಿದೇವಚರಿತಂ ಕರ್ಣಾಮೃತಸ್ಯನ್ದಿಯಕ್ಕಿದು ಭವ್ಯಾವಳಿಗೆನ್ದು ಪೇೞಿಸೆ ಬುಧರ್ Ap. 16, 78]; (J. 1, 8; 9, 12; 10, 27).

**ಪೇೞು pēḷu.** = ಪೇೞ್, etc. P. p. ಪೇೞಿ. see Bp. 2, 43; 5, 57; 10, 7; 23 sum.; 45 sum.; J. 29, 24. ಯೋಗಿ ಪೇೞುವಂ (ಮೂತ Mr. 245). ಓದನ್ದು ಪೇೞುವನು (ಉಪಾಧ್ಯಾಯ 251).

**ಪೇೞುವಿಕೆ pēḷuvike.** saying, telling. ವ್ಯಕ್ತಮಾಗಿ ಪೇೞುವಿಕೆ (ನಿಗಾದ, etc. Si. 391).

**ಪೈ pai. 1.** for Kannaḍa words with this initial syllable in MSS. or books see ಪಯ್, *e. g.* ಪೈರು = ಪಯ್ರು.

**ಪೈ pai. 2.** upper; external; extra; upon (Te. ಪಯಿ, ಪಯಿನ, ಪೈ). — ಪೈಗಸ್ತಿ, ಪೈಗಸ್ತು. an extra overseer or superintendent (My.); a patrole (My.; Br., H.).

**ಪೈ pai.** a copper coin, the 12th part of an Aṇa, a Pie (My.; B. 4, 51. 180). ನಾಲ್ಕು ಪೈ (ಪಣ G.).

**ಪೈಕ paika. 1.** = ಪಯ್ಕ. a division, etc.

**ಪೈಕ paika. 2.** money (Mhr. ಪೈಕಾ; R.; Te. ಪೈಕ, a small copper coin, a farthing, a half penny; cash, money).

**ಪೈಕಿ paiki.** of or out of; from amongst (My.; Br., Mhr.).

**ಪೈಗಮ್ಬರ paigambara.** a prophet; a messenger from heaven (Mhr., H. ಪೇಗಮ್ಬರ; My.).

**ಪೈಗು paigu.** = ಪೈಗೋ. Pegu (My.).

**ಪೈಗೋ paigō.** = ಪೈಗು. (My., T.; Si. 272).

**ಪೈಂಗಲ paiṅgala.** (fr. ಪಿಂಗಲ). the fifty-first year of the cycle of sixty (My.).

**ಪೈಜಣ paijaṇa.** small tinkling bells for the feet (ಕಿಱುಗೆಜ್ಜೆ, ಸಣ್ಣ ಗೆಜ್ಜೆ G.; B. 4, 125).

**ಪೈಜಾರು paijāru.** a shoe (My.; Br.; Mhr., H.).

**ಪೈಟಿ paiṭi.** a summerset (My.; H.). see ಪಟ್ಟಿಸು.

**ಪೈಠಣ paiṭhaṇa.** N. of a town (B. 3, 103).

**ಪೈಠಣಿ paiṭhaṇi.** manufactured at Paiṭhaṇa (Mhr.; Br., My.). ಪೈಠಣಿಸೀರೆ, a kind of silk garment (My.).

**ಪೈಠರ paiṭhara.** (fr. ಪಿಠರ). *boiled in a pot.*

**ಪೈತೃಕ paitṛika.** (fr. ಪಿತೃ). = ಹ್ಯತಿಗೆ. paternal; ancestral. 2, a śrāddha in honour of deceased ancestors (J. 10, 26. 27).

**ಪೈತೃಕಕರ್ಮ paitṛika-karma.** = ಪೈತೃಕ No. 2. (Si. 244).

**ಪೈತೃಕಧನ paitṛika-dhana.** property acquired by a father, ancestral property, patrimony. (My.).

**ಪೈತೃಷ್ವಸೇಯ paitṛiṣvasēya.** (fr. ಪಿತೃಷ್ವಸೃ). *a paternal aunt's son.*

**ಪೈತೃಷ್ವಸ್ರೀಯ paitṛiṣvasrīya.** *a paternal aunt's son.*

**ಪೈತ್ಯ paitya.** Tbh. of ಪಿತ್ತ (or of Sk. ಪೈತ್ತ, bilious). bilious humour (ಮಾಯು, ಪಿತ್ತ Si. 203); choler; foolishness, madness (My.). [T.] ಪೈತ್ಯವಾದವನಿಗೆ ಸೈತ್ಯವಾಗದೋ? — ದೈತ್ಯನಾದವನಿಗೆ ಪೈತ್ಯವೆಮ್ಬುವದೇನು? (Prvs.).

**ಪೈತ್ಯಗಾತಿ paitya-gāti.** a foolish, mad woman (My.).

**ಪೈತ್ಯಗಾಱ paitya-gāṟa.** a foolish, mad man (My.).

**ಪೈತ್ರ paitra.** *paternal; ancestral.* 2, the part of the hand between the thumb and fore-finger (ಹೆಬ್ಬೆರಳು ಮತ್ತು ತೋಱು ಬೆರಳು ಇವುಗಳ ನಡುವಿನ ಅನ್ತರ G.); the root of the fore-finger.

**ಪೈಮಾಯಿಷಿ paimāyiṣi.** surveying and measuring of lands (My., Br.; Mhr., H. ಪೈಮಾಷೀ).

**ಪೈಲವಾನ pailavāna.** an athlete, a professional wrestler (My.; B. 5, 165; Mhr. H. ಪಹಿಲವಾನ, ಪಹಿಲವಾನ, ಪೈಲವಾನ; Br. ಪೈಲುವಾನ).

**ಪೈವಸ್ತಿ paivasti.** endorsement of a letter specifying the date of its receipt (My., also ಪೈವಸ್ತಾ; Mhr., H.).

**ಪೈಶಾಚ paiśāca.** (fr. ಪಿಶಾಚ). relating or belonging to a piśāca; infernal, demoniacal. 2, a piśāca (J. 2, 60). 3, the lowest form of marriage.

**ಪೈಶಾಚಿಕ paiśācika.** = ಪೈಶಾಚ No. 1. 2, a sort of Tadbhava, gibberish (Ch. p. 22).

**ಪೈಶುನ್ಯ paiśunya.** (fr. ಪಿಶುನ). information, tale-bearing, back-biting, calumny, reporting evil of others. see ಪೊಱಟು.

**ಪೈಸ paisa.** a copper coin, the 3rd part of an Aṇa, or 4 Pays, or 1 Duḍḍu; [hundredth part of a rupee]; (My.; M. ಪೈಸೆ; Mhr. ಪೈಸಾ); money (My.; Mhr.). see ಕಾಲ್-.

**ಪೈಸಲಾತಿ paisalāti.** final settlement (My.; H.).

**ಪೈಸಲು paisalu.** decision of a case or dispute; settlement of a debt (My.; Mhr., H. ಫೈಸಲ). — ಪೈಸಲುಗೊಳ್ಳು. -ಕೊಳ್ಳು. to get a decision in one's favour. ಪೈಸಲುಗೊಣ್ಡ ಮನುಷ್ಯನಿಗೆ ಮಯ್ಯಾಲ ನಮ್ಬರು (Prv.). — ಪೈಸಲುನಾಮೆ. a written adjudgment of any case (My.).

***ಪೊಕ್ಕ pokka.** sharpness of intellect? ಬೆಸಗೊಳ್ಳ ಗುಣಾರ್ಣವನ ಲೆಕ್ಕಮುಂ ಪೊಕ್ಕಮುಮುಂ Pb. 2, 35.

**ಪೊಕ್ಕು pokku.** = ಹೊಕ್ಕು. P. p. of ಪುಗು 1 and ಪೊಗು 1.

**ಪೊಕ್ಕುಳ pokkuḷa.** (fr. ಪೊರೆ 1). = ಪೊಕ್ಕುಳಿ 1. the state of having oneself fed (by others; *cf.* ಪರಪುಷ್ಟ). — ಪೊಕ್ಕುಳ ವಕ್ಕಿ. -ಪಕ್ಕಿ. = ಪೊಕ್ಕುಳಿ-. the cuckoo (ಕೋಗಿಲೆ Śmd. II, o. r. ಪೊಕ್ಕುಳಿ-; Śm. 28).

**ಪೊಕ್ಕುಳಿ pokkuḷi. 1.** = ಪೊಕ್ಕುಳ, etc. — ಪೊಕ್ಕುಳಿಯ ಪಕ್ಕಿ. (ಕೋಗಿಲೆ Kk. 79). — ಪೊಕ್ಕುಳಿವಕ್ಕಿ. = ಪೊಕ್ಕುಳವಕ್ಕಿ, q. v.

**ಪೊಕ್ಕುಳಿ pokkuḷi. 2.** = ಪೊರ್ಕುಳಿ, q. v. a wave.

**ಪೊಕ್ಕುೞ್ pokkuḻ.** = ಪರ್ಕುೞ್, ಪೊರ್ಕುೞ್, ಹೊಕ್ಕುೞು, ಹೊಕ್ಕುೞು, ಹೊಕ್ಕುಳು, ಹೊಕ್ಕುಳು. the navel (ನಾಭಿ Śmd. I; Nr.; see Mr. s. ಅನಲಗ್ನ; T. ಪೋೞಿಲ್, ಪೊಕ್ಕುೞ್; M. ಪೊಕ್ಕುೞ್, ಪೊಕ್ಕುಳ್, ಪೋಡು; Te. ಪೊಕ್ಕಿಲಿ, ಬೊಡ್ಡು; T. also: a bubble, water-bladder; see ಪುಗುೞ್, ಪುಗ್ಗ). ಪೊಕ್ಕುೞುಜ್ಜ, ಪೊಕ್ಕುೞ್ದಳ್ (Śmd. 52). ಹರಿಯ ಪೊಕ್ಕುೞ ತಾವರೆ (162). ಬೞಿಬ್ಬುವು ಪೊಕ್ಕುೞನ್, ಉಗುರಿಸಿದುವು ತುೞುಮ್ಬು (288). see ಅಲರ್ಪೊಕ್ಕುೞ, ತಾವರೆ-

***ಪೊಗಡ pogaḍa.** a kind of tree. ಪೊಗಡದ ಪೊಸವೂವಿನ ತುಡುಗೆಗಳ್ಗಂ Ap. 11, 106.

**ಪೊಗದಿ pogadi.** = ಪಗದಿ. tribute, tax (My.; Te. ಪುದುಕು, giving; to give; T. ಪೊಱುವಲ್, giving; ವೞಂಗು, to give, *cf.* ಒಱು, gift). ಪೊಗದೀ ತೆಱುವಿಕೆ (ದಾನ Si. 263).

**ಪೊಗರ್ pogar.** = ಹೊಗರು. shine, brightness, lustre, colour (ಕಳೆ, ಕದಿರ್, ಮಿಸುಗು, ಪೊಳಪು, etc., ಕಾನ್ತಿ Kk. 25; Śm. 15; Te. ಪೊಗರು, ಪೊಗುರು; T., M. ಪುಗರ್; *cf.* ಪೊಂ, ಪೊಚ್ಚಱು, ಪೊಡರ್ಪು, ಪೊೞೆ 1). [ಪೆರ್ಚಿದ ಕಟ್ಟಲೆ ತೀವ್ರ ರತ್ನಸಂಹತಿಗಳ ದೀಪ್ತಿಯಿಂ ಬಿಸುಗೆಯಾಗಿ ಕರಂ ಪೊಗರ್ವಟ್ಟಿಗುರ್ವುಮುದ್ದು ಪನಃಮುನೀಯೆ Pb. 10, 50; Ap. 7, 16]. ಪೊಗರಪ್ಪ ರಜತಾದ್ರಿ (ಸಿಂಜಣಿವೆಟ್ಟು Śm. 10). see Abh. P. 1, 113; Rśv. 13, 72; V. 4, 36; J. 12, 19; 22, 21; ಸುಡ್ಪೊಗರ್, ಪಸುರುಪೊಗರ್. — ಪೊಗರಾನ್. -ಆನ್. to obtain brightness or lustre (Śśv. 4, 42). — ಪೊಗರಿೞುಸು. -ಇೞುಸು. to lose one's lustre (Abh. P. 9, 21). — ಪೊಗರೇಱು. -ಏಱು. brightness to increase (J. 24, 66). — ಪೊಗರೊಗು. -ಒಗು. lustre to come forth or proceed from (Bh. 3, 13, 22; J. 16, 4; 17, 7). — ಪೊಗರ್ಗಣೆ. -ಕಣೆ. a bright arrow (J. 22, 11). — ಪೊಗರ್ದೋಱು. -ತೋಱು. bright colour to appear (J. 5, 60). — ಪೊಗರ್ವಟ್ಟೆ. -ಬಟ್ಟೆ. (Śmd. 54, o. r. -ಟ್ಟೆ). a bright garment. — ಪೊಗರ್ಪೊಗೆ. -ಮೊಗೆ. lustre to become abundant (J. 18, 34).

**ಪೊಗಸು pogasu. 1.** expansion (Cpr. 6, 58; 8, 4 va.; see ಪೊಂಗು 1 and ಪೊಚ್ಚ 1).

***ಪೊಗಸು pogasu. 2.** the dawn. ಪೇಟ್ ಈಗಳೊ ಬಯ್ಗೆಯೋ ಪೊಗಸೊ ನಾಳೆಯೊ ಸಾಡಿದೊ ನಿನ್ನ ಜೀವಿತಂ Ap. 3, 63.

**ಪೊಗೞ್ pogaḷ. 1.** = ಪೊಗೞು, ಹೊಗೞು. to praise (ಸಂಸ್ತವನ Śmd. Dh.; ಕೊಣ್ಡಾಡು 366 Cm.; T., M. ಪುಗೞ್; Te. ಪೊಗಡು, ಪೊಗಡುದು; Tu. ಪುಗರ್). P. p. ಪೊಗೞ್ದು (49). [ಪೞಗೆ ಮೇೞ್ ಪೊಗೞ್ಗೆ Kr. 1, 136: Pb. 4, 96; Vr. 4, 26]. ಗೊರವನಲ್ಲದೆ ಪೊಗೞೆಂ (57). ಕುಲಮುಂ ಛಲಮುಂ ವಿದ್ಯಾಬಲಮುಂ ಶೌರ್ಯಾವಲೇಪಮುಂ ಪೊಗೞೆ ನೆಲಂ (128. 130). ಮಚ್ಚಿ ಪೊಗೞ್ದಂ (280). ಪನ್ನಿ ಪೊಗೞ್ ಚಾಗಿ ಕೊಟ್ಟಂ (296). ಪೊಗೞ್ದಂ, ಪೊಗೞ್ಗೆ, ಪೊಗೞ್ಗುಂ (55). ನನ್ನನ ವನಲಕ್ಷ್ಮಿ (ವಸನ್ತಮೂರ್ತಿಯಂ) ಕೀರರವದಿಂ ಪೊಗೞ್ದು (Cpr. 7, 41). ಜೇಡಂ... ಮುತ್ತಂ ತೆಗೆದು, ಸತಿಗೀಯೆ ಪೊರೆಯ ಜೇಡರು ಪೊಗೞ್ವರು (Rāghc. 17, 69). ಪೊಗೞಲ್ ಪಟ್ಟುದು (ಸ್ತುತ Nr.). see Cpr. 1, 41; 2, 71; 6, 69 va.; 7, 42; Śsv. 1, 79 va.; J. 3, 40. [— ಪೊಗೞಲ್ವೇಡ: -ಅಲ್-ಬೇಡ. need not praise? ಎನ್ದೊಡೆ ಪೊಗೞಲ್ವೇಡ ಗುಣಾರ್ಣವನ ಜನ್ಮದಿನದ ಬೆಡಂಗಂ Pb. 1, 148].

**ಪೊಗೞ್ pogaḷ. 2.** = ಹೊಗೞು 2. (Śmd. 59). praise; renown (T., M. ಪುಗೞ್; Te. ಪೊಗಡು). — ಪೊಗೞ. -ಅ 3. a renowned man (ಸತ್ವಾಧಿಕ, ಉತ್ತಮ, ಶಕ್ತ, ಕ್ಷಮ 246).

**ಪೊಗೞಿಸು pogaḷisu.** = ಹೊಗೞಿಸು. to cause to praise [ಮಾನಧನಾ ಪೊಗೞಿಸಲೇಂ ದಾಸಿಯೆ ನೀನುನ್ತೆ Kr. 3, 106]; (Cpr. 2, 57; 4, 78; Abh. P. 13, 84; Bp. 36, 42). ಪೊಗೞಿಕ್ಕುಂ (Śmd. 268).

**ಪೊಗೞು pogaḷu.** = ಪೊಗೞ್ 1, etc. P. p. ಪೊಗೞಿ. ಪೊಗೞೊತಲೆ (Bp. 49, 21). ಪೊಗೞಿದರ್ (C. Bp. 5, 52).

**ಪೊಗೞ್ಕೆ pogaḷke.** = ಹೊಗೞಿಕೆ. praising, praise (C. Bp. 47, 5; J. 4, 6; 23, 48; 34, 53; Tu. ಪುಗರಿಗೆ).

**ಪೊಗೞ್ತೆ pogḷ-te.** (Śmd. 247). = ಹೊಗೞಿಕೆ. praising, praise (ಕೀರ್ತನ Śmd. I; Grj. 10, 61 va.; Te. ಪೊಡ್ತೆ). [ನೆಗೞ್ತೆವೆತ್ತ ಪತಿಭಕ್ತಿಯ ಪ್ಪೆಮೆಯ ಮಾನಸಿಕ್ಕೆಯಗ್ಗಲದ ಪೊಗೞ್ತೆ ತನ್ನದೆನೆ ಪೆಮ್ಪು ಮನೋಹರಿಗಲ್ಲದಕ್ಕುಮೇ Ap. 1, 72]. — ಪೊಗೞ್ತೆವಡೆ. -ಪಡೆ. to be praised (Rśv. 4, 112 va.). — ಪೊಗೞ್ತೆವೆಱ್. -ಪೆಱ್. = ಪೊಗೞ್ತೆವಡೆ (Abh. P. 7, 130).

**ಪೊಗಿಸು pogisu.** = ಪುಗಿಸು, etc. to cause to enter (Bp. 55, 14; Bh. 1, 8, 35; Rśv. 5, 23 va.; 5, 24; J. 8, 31; 17, 57; see ಮಜ್ಜನಪ್ಪೊಗಿಸು).

**ಪೊಗು pogu. 1.** = ಪುಗು 1, etc. to enter, etc. (J. 15, 49; 28, 59; Śsv. 4, 74; see ಕಿವಿಪೊಗು). P. p. ಪೊಕ್ಕು. [ಎಡೆವೊತ್ತಿ ಪೊಕ್ಕು ಕೆಲನಂ ಕೊರ್ಬಿತ್ತಿಸದು Kr. 1, 66; Pb. 1, 8]. [Tu. ಪೊಗ್]. ಪೊಗಲ್ ಅರಿದಾದುದು (ಕಲಿಲ, ಗಹನ Nr.). ಧುರದ ಪೊಗುವುದು (ಅಭಿಹಾರ Mr. 490). — ಪೊಗವೇೞ್. -ಪೇೞ್. to tell to enter (Grj. 6, 26).

**ಪೊಗು pogu. 2.** = ಒಗು 1, etc. to become loose, etc. (J. 3, 25; T. ಪೂಜಿ).

**ಪೊಗೆ poge. 1.** = ಹೊಗೆ 1. to smoke; to be smoked (Śsv. 4, 37; T. ಪುಗೈ, M., Tu. ಪುಗೆ, Te. ಪೊವೆ). [ತ್ರಿಪುರವ್ಪೊತ್ತಿ ಸಿದವನ್ತೆ ಪೊತ್ತಿ ಪೊಗೆದತ್ತೆತ್ತಂ ವಿಯನ್ಮಣ್ಡಳಂ Pb. 11, 17].

**ಪೊಗೆ poge. 2.** = ಪೊಗೆದು, ಹೊಗೆ 2. short P. p. of ಪೊಗೆ 1, in ಪೊಗೆ ಪೊಗೆದು (J. 26, 13).

**ಪೊಗೆ poge. 3.** = ಹೊಗೆ 3. smoke; steam, vapour (ಧೂಮ Mr. 47; T. ಪುಗೈ; Tu. ಪುಗೆ; Te. ಪೊಗೆ, ಪೊವೆ). [ಅದಱ ಪೊಪಟ್ಟು ಸೀಟ್ದ ಪೊಗೆಯುಂ Pb. 3, 76; Ap. 2, 40]. see Cpr. 5, 64 va.; 5, 132; 8, 4 va.; C. Bp. 5, 2; Rśv. 1, 43; 9, 18. 23; J. 15, 24; ಕಾರ್ಬೊಗೆ. — ಪೊಗೆಗೊಳ್. -ಕೊಳ್. to be smoked (Abh. P. 11, 83). — ಪೊಗೆ ಪೋಗು. to become full of smoke (Abh. P. 16, 57). — ಪೊಗೆ ಪೊಗವಾಗು. smoke to begin to appear (Abh. P. 16, 93). — ಪೊಗೆ ವೞಿಯಿಗೆಯ. -ಪೞಿಯಿಗೆ-ಅ 3. he whose standard is smoke: Agni, fire (ಕಿರ್ಚು Kk. 21; ಅನಲ Śm. 11).

**ಪೊಂ- poṅ. ಪೊಱ್-.** = ಪೊನ್, etc. gold (ಕಲ Ct. I, 47; Te.). ಬುಧರಿಗೆ ಸಕಲರಿಗೆ ಪೊಂಗಳನು ... ದಾನವ ಮಾಡಿದನು (Prll. 3, 12). — ಪೊಂಗಟ್ಟ. -ಕಟ್ಟ. a golden high structure (Cpr. 10, 66). — ಪೊಂಗದ. -ಕದ. a golden or gilt half of a folding door (C. Bp. 5, 48). — ಪೊಂಗಱು. a feather of gold (of an arrow, Abh. P. 13, 43). [— ಪೊಂಗಱಿಗೆ. a kind of decoration made of gold. ಚೌಪಳಿಗೆಗಳ ಪೊನ್ನ ಪೊಂಗಱಿಗೆ ಸೀಳ್ವಂ ಬೆಳ್ಪುಮಂ ತಾಳ್ದಿ Pb. 3, 40 va.]. — ಪೊಂಗಲಸ. -ಕಲಸ. a golden vessel (Abh. P. 5, 125; Bp. 58, 68; Rśv. 11, 81; J. 3, 11; 34, 1-4). — ಪೊಂಗವಚ. -ಕವಚ. a golden coat of mail (Cpr. 10, 64). — ಪೊಂಗವಡಿಕೆ. -ಕವಡಿಕೆ. a golden (crescent-formed) ornament of the forehead (swinging about, Cpr. 3, 47). — ಪೊಂಗಳನ್ತಿಗೆ. a golden water-jar (Cpr. 8, 62). [— ಪೊಂಗಳಸ. -ಕಳಸ. = ಪೊಂಗಲಸ. a golden vessel. ಪೊಂಗಳಸಂಗಳೊಳಿರ್ದ ಪುಣ್ಯತೋಯಂಗಳೊಳಟ್ಟಱಿಂ ಮಿಸಿಸಿ Pb. 10, 15]. — ಪೊಂಗಾಳೆ. -ಕಾಳೆ. a golden horn (C. Bp. 5, 7). — ಪೊಂಗಿಣ್ಡಿ. a golden giṇḍi (Rśv. 14, 158). — ಪೊಂಗಿಱುಗಟೆ. gold castanets (Bp. 5, 41). — ಪೊಂಗುಡುಪು. -ಕುಡುಪು. a golden drum-stick (Rśv. 6, 30 va.). — ಪೊಂಗುಪ್ಪಸ. -ಕುಪ್ಪಸ. a golden bodice. ಪೊಂಗುಪ್ಪಸನ್ದುಡು. -ಒ-ತುಡು. to put on a golden bodice (Rśv. 13, 70). — ಪೊಂಗುಳಿಗೆ. a gold ball (Bp. 4, 17). — ಪೊಂಗೆಜ್ಜೆ. a small gold bell ornament (My.). [— ಪೊಂಗೆಯ್. -ಕೆಯ್. to spend money (gold coins). ಸಾಸಿರ ಪೊಂಗೆಯ್ದುಂ ಱಿ ಕಾಸಟಿವೆ ನ್ದೊಸ್ದು ಲಕ್ಕಗೆಯ್ವುದು Pb. 3, 44]. — ಪೊಂಗೇದಗೆ. -ಕೇದಗೆ. a gold-coloured Pandanus [ಮಗ ಮಗಿಪ ಜಾದಿ ಪೊಂಗೇದಗೆ ಮಲ್ಲಿಗೆಯೆವ್ಪು ಪಲವು ಪೂಮಾಲೆಗಳಂ Ap. 5, 36]; (Abh. P. 2, 13 va.; Rśv. 10, 31 va.). — ಪೊಂಗೊಡ. -ಕೊಡ. a golden water-vessel [ಪೊಂಗೊಡದಂ ತಮಾಳಪಲ್ಲವದೊಳ್ ಮುಚ್ಚಿದನ್ದದೊಳ್ Pb. 1, 125]; (Grj. 3, 91 va.; V. 5, 7; J. 3, 7; 6, 30; 11, 17). — ಪೊಂಗೊಳ್. -ಕೊಳ್. to take gold (Śāstrasāra in W. v. 1270). — ಪೊಂಗೊೞಲ್. -ಕೊೞಲ್. a golden fife (Bhāgavata 10, 18, 18). — ಪೊಂಗೋಲ್. -ಕೋಲ್. a golden staff (Grj. 10, 60).

***ಪೊಂಕ poṅka.** pride, arrogance. ಅಲರ್ದರೆಗಳಿಗೆಯೆ ಜಾದಿಯ ಮಲೆಪುಂ ಮಲ್ಲಿಗೆಯ ಪೊಂಕಮುಂ Ap. 11, 122. — ಪೊಂಕಂಗಿಡಿಸು. -ಒ-ಕಿಡಿಸು. to do away with one's pride. ವಾಯುಪಥದೊಳ್ ಶಿತಾಸ್ತ್ರಂಗಳ್ ಪೊಂಕಂಗಿಡಿಸೆ ಸುಗಿದಂ ಭಾರ್ಗವಂ Pb. 1, 80.

**ಪೊಂಗ poṅgu2-a3.** a man of ebullition, or of elated courage. see ಚೆನ್ನ-.

**ಪೊಂಗರ poṅgara.** = ಹೊಂಗರ. the Indian coral tree. (St. & Pl.).

**ಪೊಂಗಲು poṅgalu.** = ಪುಟ್ಟು q. v., etc., ಪೊಂಗಿಲ್. a sweet preparation. (My.; T. ಪೊಂಗಲ್; Te. ಪೊಂಗಲಿ, ಪೊಂಗಳಿ; T. ಪೊಂಗಲ್ also: a boiling, a bubbling up; T. ಪುಗರ್ವು, ಪುನ್ನ, ಪೊಮ್ಮಲ್, boiled rice; cf. ಬೋನ; see s. ಪುಗ್ಗು). — ಪೊಂಗಲು ಹಬ್ಬ. a festival in honour of the sun on its entering the sign of capricorn when poṅgalu is eaten (My.; T.; Te. ಪೊಂಗಲಿ-).

**ಪೊಂಗಿಲ್ poṅgil.** = ಪೊಂಗಲು, etc. (Śāstrasāra in W. v. 1270).

**ಪೊಂಗಿಸು poṅgisu.** to cause to expand, etc. (Bp. 1, 49; Śāstrasāra in W. v. 1270). ಪೊಂಗಿಸಿದಂ (Śmd. 274).

**ಪೊಂಗು poṅgu. 1.** = ಹೊಂಗು. to boil over (ಅಳವರಿದು ಬೇವುದು Ct. I, 73; see ಪುಗ್ಗು). 2, to burst open, to expand, to open, to blossom, to swell, to be elated, to exult, to be overjoyed (to become manifest, ಸ್ಫುಟನ Śmd. Dh.; Te.; cf. ಪೊಗಸು, ಪೊನ್ 2-). [ಬಲ್ಮುಗುಲೊಳ್ ಪೊರೆದೋಱಿ ತಮ್ಮೊಲರ್ಪೊರೆವೊರೆಯಂ ಸಡಿಲ್ಚೆ ನಡುಪೊಂಗಿರೆ ಮಲ್ಲಿಗೆಗಳ್ ವಸನ್ತದೊಳ್ ಬಿರಿದೊಡೆ Ap. 11, 110]. ಪೊಂಗಿ ಪೊಡವಡುಹಂ (ನಮು, ವನ್ದನ Mr. 461). see Cpr. 5, 98; 8, 103; Bp. 4, 66; 9, 10; 21, 9; 23, 35; 24, 35; 29, 24; 35, 2; 43, 56; 48, 24; 50, 41; 53, 59; Śśv. 4, 12. 74; ಬೆಸ್ಪೊಂಗು. [3, to be proud, over bearing. ಈ ರಂಗಮೆ ರಣರಂಗಮಾಗೆ ಕಾಮುವನುಮಳವಂ ಪೊಂಗದಿರಿದಿರ್ಚುರ್ Pb. 2, 80].

**ಪೊಂಗು poṅgu. 2.** boiling over; expanding, etc. (Cpr. 9, 71; Te.; see ಪೊಂಗ್). [2, pride.— ಪೊಂಗುಱು. -ಉಱು. to leave off pride. ಪೊಂಗುಱುದು ಭರತ ನೃಪಚರಣಂಗಳ್ಗಾ ಮಾಗಧಾ ಮರಂ ... ಬಾಗಿದಂ ಮೂಱಿಡೆಯೊಳ್ Ap. 12, 111].

**ಪೊಚ್ಚ pocca. 1.** (manifestation, see ಪೊಂಗು 1): clearness, brightness, whiteness. ಪೊಚ್ಚಪೊನ್ದಾವರೆ (J 3, 8; 8, 4). ಪೊಚ್ಚಕೆಱುಗೆ (Bp. 14, 15). — ಪೊಚ್ಚ ಪೊಸ. bright and new or fresh (Abh. P. 3, 35; 7, 29; 8, 47; 17, 7; 30, 2). see ಪೊಸ-.

**ಪೊಚ್ಚ pocca. 2.** a stream, a river (ಪೊಱೆ Śmd. II; ಪೊಱೆ, ತೊಱೆ Śm. 36; see s. ಪುಗ್ಗು). ತಾನೆಚ್ಚಂ ಪೊಚ್ಚಮಲ್ಲದ ಅರಿ ವಾಹಿನಿಯಂ (Śmd. 263). see Rśv. 6, 23; ಬಾಸ್ಪೊಚ್ಚ.

*__ಪೊಚ್ಚಱ poccaṟa.__ fame. ಕೋಡಗಗಟ್ಟುಗಟ್ಟ ತರಲಿನ್ನಾರಾ ಪರನೃಪ ಪೊಚ್ಚಱ ಸಾಮನ್ತರೆ ಪೋಗಿಮೆಸ್ದು ಪಲರಂ ಪೇೞ್ದಾಗಳ್ Pb. 5, 21.

**ಪೊಚ್ಚಱಿಸು poccaṟisu.** (to break forth), to start into view, to become evident or manifest, to appear; to shine (ಕಣ್ಣಲೆ, ಪೊಡಕರಿಸು Śmd. II; Kk. 75). [ಅನೇಱುಪೆನೆಸ್ದು ಪೊಚ್ಚರಿಸಿ ಬನ್ದು ಸುಯೋಧನನುಗ್ರಚಾಪಮಂ ಮೂಱುಸೂಟ್ ಬಲವನ್ದು ಪೊಡಮಟ್ಟು Pb. 3, 58].

**ಪೊಚ್ಚಱು poccaṟu.** (ಪೊಚ್ಚಱಿಸು). to appear, etc. (ಸ್ಫುರಣ Śmd. Dh.; cf. ಪೊಡರ್). ಪೊಚ್ಚಱುಗುಂ ತೃತೀಯೆ ಬನ್ದು ಅನ್ತಱ ಮಮ್ಪು ಪದಕ್ಕಂ (Śmd. 398; Cm.: ಪೊರ್ದುಗೆಯಪ್ಪುದು).

**ಪೊಚ್ಚಳಿ poccaḷi.** either = ಪೊಚ್ಚ 2, a river, or = ಪೊಳೆ 4, shine, effulgence (ಪೊಳೆ Kk. 75, which also may be ಪೊಱೆ).

**ಪೊಜ್ಜಲಿಸು pojjalisu.** = ಪಜ್ಜಳಿಸು. Tbh. of ಪ್ರಜ್ವಲಿಸು. to shine. (Bp. 26, 10).

**ಪೊಂ- poṅ. ಪೊಞ್-.** = ಪೊನ್, etc. gold.— ಪೊಂಜಗಲಿ. a golden bench or seat (Rśv. 10, 31 va.; Śśv. 2, 42 va.). — ಪೊಂಜಳಮ್ಪ. a golden veil (V. 10, 4). — ಪೊಂಜಾಳಿಗೆ. a sack filled with gold coins (V. 8, 4). — ಪೊಂಜುರಿಗೆ. -ಸುರಿಗೆ. (Śmd. 83). a golden knife or dagger [ಹಟತ್ಕಟೀಸೂತ್ರ ಪರಿಸ್ಫುರಿತದೊಳಂ ಕಟ್ಟಿದ ಪೊಂಜುರಿಗೆಯೊಳಂ ಜನಮನೇಂ ಮನಂಗೊಳಿಸಿದುದೋ Ap. 4, 36]; (Rśv. 6, 11 va.). ಕಟ್ಟಿದ ಪೊಂಜುರಿಗೆಯೊಳಂ ಜನಮ್ ಏಂ ಮನಂ ಗೊಳಿಸಿದುದೋ? (Śmd. 83). — ಪೊಂಜೂಡಗ. -ಸೂಡಗ. a gold bracelet (Cpr. 10, 7).

**ಪೊಂಚು poñcu.** = ಹೊಂಚು 1. to be in wait; to lurk (J. 26, 24; Te.).

**ಪೊಂಜು poñju.** = ಪಂಜು. a torch. ಪೊಂಜು ಸುಟ್ಟರೂ ನಂಜು ಹೋಗಲಿಲ್ಲ (Prv.).

**ಪೊಟ್ಟಗೆ poṭṭage. 1.** = ಪಟ್ಟಿಗೆ 1, etc. obtaining, etc. see ಗರಪೊಟ್ಟಗೆ.

*__ಪೊಟ್ಟಗೆ poṭṭage. 2.__ = an imitative sound signifying bursting. ಪೊಟ್ಟಗೊಡೆದತ್ತು...ಅಪ್ಪುರ ಪಟಳಂ Pb. 10, 67.

**ಪೊಟ್ಟಣ poṭṭaṇa.** = ಪೊಟ್ಟಳ, ಪೊಟ್ಲ, ಪೊಟ್ಲ 1. (Tbh. of ಪುಟ; cf. ಪೊಡ 1.) a small cup or packet made of leaves, paper, etc. (My.; Bp. 8, 60; 17, 8; Rśv. 13, 88; Tu.; T. ಪೊಟ್ಟಣ, ಪೊಟ್ಟಲ; Te. ಪೊಟ್ಲ, ಪೊಟ್ಲ; cf. Tbh. ಪುಡಿ); a bag. ನೀರ ಪೊಟ್ಟಣ (ಕಾರ ಮುಗಿಲ್ Ct. I, 87). ಪೊಟ್ಟಣ ಕಟ್ಟಿ ಕೊಣ್ಡರೆ ತಟ್ಟನೆ ಹೋಗನೇ? (Prv.). — ಪೊಟ್ಟಣಗಟ್ಟು. -ಕಟ್ಟು. to tie or prepare a poṭṭaṇa (Bp. 18, 60). — ಪೊಟ್ಟಣವಾರಿ. water in a cup of leaves. ಸರೋರುಹದ ಪತ್ರದಲಿ ಪೊಟ್ಟಣವಾರಿಯನು ಕಟ್ಟಿ! (Bh. 3, 23, 12).

*__ಪೊಟ್ಟನೆ poṭṭane.__ = ಪೊಟ್ಟಗೆ 2. ದೇವದತ್ತನಿಸ್ವನದೊಳೆ ತೀವಿ ಪೊಟ್ಟನೊಡೆವನ್ತೆವೊಲಾಮುದಜಾಣ್ಡ ಮಣ್ಡಳಂ Pb. 11, 145.

**ಪೊಟ್ಟರೆ poṭṭare.** = ಪಟ್ಟೆ, ಪೊಟ್ಟೆ 1, ಪೊಟ್ರೆ, ಪೋಟೆ, (ಪೋಟಲ್), ಹೊಟ್ಟೆ 2, ಹೊಟ್ರೆ, ಹೋಟೆ, ಹೋಟ್ರೆ. a hole in a tree, the hollow of a tree (My.; T. ಪೊತ್ತಲ್, ಪೊಯ್, ಪೊಳ್ಳಲ್, ಪೋಱು; see ಪೊಳ್ಳು).

**ಪೊಟ್ಟವಣಿ poṭṭavaṇi.** a term used in saṅgīta (Bp. 19, 8).

**ಪೊಟ್ಟಳ poṭṭaḷa.** = ಪೊಟ್ಟಣ, etc. (My.).

*__ಪೊಟ್ಟಳಿಗೆ poṭṭaḷige.__ = ಪೊಟ್ಟಣ, ಪೊಟ್ಟಳ, etc. ದೀನಾರ ಸಹಸ್ರದ ಪೊಟ್ಟಳಿಗೆಯುಮಂ ಕೊಣ್ಡು Vr. 17, 24.

*__ಪೊಟ್ಟಳಿಸು poṭṭaḷisu.__ to be full of vanity, to be puffed up. ಅರ್ಥದ ಕೇಡೆನೆ ಪೇೞ್ದು ಬೀಗಿ ಪೊಟ್ಟಳಿಸಿ ನೆಗೞ್ತೆಗಾಟಸುವ ಮಮ್ಮವಿಯುಂ Pb. 1, 12.

**ಪೊಟ್ಟು poṭṭu.** = ಹೊಟ್ಟು. chaff, husk, a pod emptied of its contents (ಕಡಂಗರ, ಬುಸ Nr.; Cpr. 6, 39; Tu.; M. ಪುಟ್ಟಲ್; Te.; T., M. ಪೊಟ್ಟು, an empty, or blighted, ear of corn; useless; M. ಪುಟ್ಟಲ್ also: a basket; ears of corn just before shooting forth, see ಪೊಡ 3; M. ಪೊಟ್ಟ, what is broken, maimed, see ಪುಡಿ).

**ಪೊಟ್ಟೆ poṭṭe. 1.** = ಪೊಟ್ಟರೆ, etc. ಮರದ ಪೊಟ್ಟೆ (ಪೋಟಲ್ Śmd. I, o. r. -ಪೋಟೆ).

**ಪೊಟ್ಟೆ poṭṭe. 2.** = (ಪುಟ್ಟ 2, No. 2), ಪೊಡೆ 3, ಹೊಟ್ಟೆ 3. the belly, the paunch, the stomach; the womb; the cavity or body, as of a ship (ಪೊಡೆ, ಬಸಿಱ್ Śm. 70; Te.; Mhr. ಪೋಟ). see Cpr. 8, 61; ಕಿಱ್ಪೊಟ್ಟೆ, ಕಿಱ್ಪೊಟ್ಟೆ.

**ಪೊಟ್ಣ poṭṇa.** = ಪೊಟ್ಟಣ, etc. (My.).

**ಪೊಟ್ರೆ poṭre.** = ಪೊಟ್ಟರೆ, etc. a hole in a tree. (My.).

**ಪೊಟ್ಲ poṭla. 1.** = ಪೊಟ್ಟಣ, etc. (My.).

**ಪೊಟ್ಲ poṭla. 2.** Tbh. of ಪಟೋಲ. the snake gouard. (My.; T. ಪುಡಲ್, ಪುಡೋಲ್).

**ಪೊಡ poḍa. 1.** = ಪುಟ, etc. Tbh. of ಪುಟ. a cup or hollow formed by folding, especially that formed by joining the palms of the hands in token of respect. — ಪೊಡ ಮಡಸು. = ಪೊಡಮಡಿಸು. (Bp. 48, 30; 53, 62). — ಪೊಡಮಡಿಕೆ. = ಪೊಡವಡಿಕೆ. (ತಱುಬಲ್ Kk. 76). — ಪೊಡ ಮಡಿಸು. to cause to salute respectfully (Bp. 4, 43). 2, to have oneself saluted (4, 68). — ಪೊಡ

ಮಡು. = ಪೊಡವಡು. to join the palms of the hands into a cup (and thus to lift them up towards the forehead in token of respect), to make obeisance, to salute respectfully [ಗಾಂಗೇಯಂ ...ಅರ್ಘ್ಯಮಂ ಕೊಟ್ಟು ಪೊಡಮಟ್ಟು Pb. 1, 77 va.]; (ನಮಸ್ಕಾರ Śmd. Dh., o. r. ಪೊಡವಡು; Grj. 4, 55 va.; 5, 42 va.; Bp. 4, 1. 11; 46, 52; 47, 46; Rśv. 14, 5 va.; V. 9, 59; J. 5, 30). ಪೊಡ ಮಡು, ಪೊಡ ಮಡು. rep. (Bp. 6, 27). — ಪೊಡವಡಿಕೆ. -ಮಡಿಕೆ. a respectful salutation (ತುಱುಲ್ Śmd. I & II; ತುಱುಲ್, ಎಱಗು, ಮೊಟ್ಟು, ಮಣಿ, ಕುಮ್ಮು, ನಮಸ್ಕಾರ Śm. 34). — ಪೊಡವಡು. = ಪೊಡ ಮಡು. (ಮುಟ್ಟು Śmd. I; Cpr. 4, 13 va. & 14 va.; 4, 74; 5, 91 va. & 121; Abh. P. 10, 181 va.). [ಒಳ್ಳಿತಪ್ಪ ದಿವಸ ವಾರ ವಿದ್ಯಾನಕ್ಷತ್ರದನ್ದು ತಮ್ಮನುಕೂಲದೊಜಗರ್ಗೆಱಗಿ ಪೊಡವಟ್ಟು ವಿದ್ಯಾ ಪ್ರಾರಮ್ಭಂಗೆಯ್ದರ್ Vr. 3, 24] ದೇವರ್ಗೆ ಪೊಡವಟ್ಟಂ (Śm. 159, o. r. ಪೊಡ ಮಟ್ಟಂ). ವಿದ್ಯಾದೇವತೆಗೆ ಪೊಡವಟ್ಟು (Abh. P. 14, 105 va.). — ಪೊಡವಡುಹ. -ಮಡುಹ. saluting respectfully. ಪೊಂಗಿ ಪೊಡವಡುಹಂ (ನಮ, ವನ್ದನ Mr. 461).

**ಪೊಡ poḍa.** 2. = ಹೊಡ 2. (Tbh. of ಸ್ಫುಟ). (manifestation), appearance; form, figure, shape (Te. ಪೊಡ; *cf.* ಪೊಟಕು; also Te. s. ಪುಗ್ಗು ?). — ಪೊಡಕರಿಸು. = ಹೊಡಕರಿಸು. to make one's appearance, to come in sight, to appear, to become manifest (ಕಣ್ಣಲೆ, ಪೊಚ್ಚಱಿಸು Śmd. II; Kk. 75; C. Bp. 10, 21; Te. ಪೊಡ ಗಟ್ಟು). ಪೊಸಗಾರ ಸಿಡಿಲ ಮುಸಕಮುನ್ ಅಸಕಟಱು, ಕೃತಾನ್ತಜಿಹ್ವೆ ಪೊಡಕರಿಸುವವೊಲ್, ಬೆಸಸು ಬೆಸಸೆನ್ದು, ಕರಮ್ ಅರ್ಬಿಸೆ ಸನ್ನಿಧಮಾಯ್ತು ವಿದ್ಯೆ ರಾವಣನಿದಿರೊಳ್ (Abh. P. 14, 105).

**ಪೊಡಪು poḍapu.** = (ಪೊಡರ್ಪು), ಪೊಳಪು 1, etc. shine, etc. see ಮಾರ್ಪೊಡಪು.

**ಪೊಡಯಿಸು poḍayisu.** = ಪೊಡಸು, ಪೊಡೆಯಿಸು, ಹೊಡಸು, ಹೊಡಿಸು. to cause to beat. etc. (Grj. 6, 54 va.; Rśv. 5, 128).

**ಪೊಡರ್ poḍar.** to tremble, to throb, to quiver [Tu. ಪುಡೆರ್, to roll about]; (Rśv. 5, 118; 10, 7; V. 4, 18; Rām. 1, 8, 3); to start into view, to manifest itself, to appear [ಪೊಡರ್ವ ಪಗೆವರನುಱದೆ ಕೊನ್ದ ಸನ್ತೋಷದೊಳಂ Pb. 2, 39 va.; Ap. 3, 9 va.]; (Cpr. 6, 32; Abh. P. 11, 105); to flash, to shine, to glitter (ಸ್ಫುರಣ Śmd. Dh.). ಬಾಚ್ವೆಣಂ ಪೊಡರೆ ಬಳ್ಕುವ ಸಮ್ಮನಶೂಲವಾಲವೊಳ್ (Śmd. 204).

**ಪೊಡರ್ಕೆ poḍarke.** quivering, shaking, contracting (Cpr. 6, 23).

**ಪೊಡರ್ಪು poḍarpu.** glitter, shine, lustre, brightness; glory; power [ಕುಚಂಗಳ ಕರ್ಪು ಪತಾಕೆಯೊನ್ದು ವಿಭ್ರಮಮನೆ ಪೋಲೆ ಪುರ್ವಿನ ಪೊಡರ್ಪೊಳಕೊಣ್ದುದು Pb. 1, 120; Ap. 11, 138]; (Cpr. 8, 67. Abh. P. 3, 60; 9, 70; 11, 141. 177; 14, 143; Grj. 6, 11; Rśv. 5, 28; 6, 11 va.; *cf.* ಪೊಗರ್). — ಪೊಡರ್ಪುಗಿಡು. -ಕಿಡು. brightness, etc. to be impaired or gone (Abh. P. 2, 60; 13, 62; 14, 49. 136; 14, 188 va.). — ಪೊಡರ್ಪುಗುನ್ದಿಸು. -ಕುನ್ದಿಸು. to cause lustre, etc. to decrease (Abh. P. 13, 143). — ಪೊಡರ್ಪುಗೆಯ್. to use one's power, to exert oneself (Cpr. 9, 76). — ಪೊಡರ್ಪು ದೋಱು. -ತೋಱು. to show forth or evince power (Abh. P. 13, 32. 113). — ಪೊಡರ್ಪುವೆಱ್. -ಪೆಱ್. to become glorious or grand (Śśv. 1, 34; 3, 52).

**ಪೊಡವಿ poḍavi.** a kind of swing or palankeen (ಆನ್ದೋಲಭೇದ Śm. 108; T. ಪೊಡ್ಯೆ, to move = ಅಜ್ಯೆ; *cf.* ಪೊಳವು 2).

**ಪೊಡವಿ poḍavi.** Tbh. of ಪೃಥ್ವಿ. (ತಿರೆ, ಧಾತ್ರಿ Ct. II, 71; ಧರೆ Kk. 16; ಎಳೆ, ಬೂವಿ, ಬುವಿ, ಧರೆ, ನೆಲ, ತಿರೆ, ರನ್ನವಸಿಱಳ್, ಮೇದಿನಿ Śm. 37; ಪಸುಧೆ 108; Mr. 539; Bp. 2, 14; 50, 32; Prll. 3, 6; Rśv. 5, 33; 13, 95 va.; J. 12, 7; 28, 27; Tc. ಪುದವಿ; T. ಪುಡವಿ). ಕಡಲ್ ಉಡಿಗೆಯಾದ ಪೊಡವಿ (Śmd. 12). ಪೊಡವಿ ಕಡಿಯದೆ ಬೆಳೆಯ ನೆಡುವದೇನೋ? (Dp. 148). ಪೊಡವಿಯಲ್ಲಿದ್ದವಗೆ ಅಡವೀ ಗೊಡವೆಯಾಕೆ? -ಪೊಡವಿಯಾಗಲಿ ಅಡವಿಯಾಗಲಿ ಬಡವಗೇನು? (Prvs.). — ಪೊಡವಿಜ. -ಜ. earth-born: the planet Mars (ಕೇಸೊಡಲ, ಮಂಗಲ Śm. 17). — ಪೊಡವಿದೇವತೆ.. the goddess earth (Dp. 119). — ಪೊಡವಿಪ. -ಪ. = ಪೊಡವಿಪತಿ (Bp. 28, 43; 53, 12). — ಪೊಡವಿಪತಿ. a king [ಪೊಡವಿಪತಿಗೊರವನೆನೆ ಪೇಟ್ಟುಡೆಯದು Kr. 1, 49]; (Bp. 19, 30; J. 13, 36; 28, 17). ಪಡುವ ಮೂಡ ತೆಂಕ ಬಡಗ ಪೊಡವಿಪತಿಗಳ್ (Śmd. 145). — ಪೊಡವಿಯೊಡೆತನ. -ಒಡೆತನ. the possession of, or rule over, a country (Bh. 1, 8, 23). — ಪೊಡವಿಯೊಡೆಯ. -ಒಡೆಯ. a king (Bp. 24, 80; 46, 22. 42). — ಪೊಡವೀಶ. -ಈಶ. a king. ಬಡವನ್ ಒಳ್ಳೆಯ ಮಾತ ನುಡಿದರಲ್ಲೆ ಮ್ಮುವರು; ಪೊಡವೀಶ ಜೊಲ್ಲೊಡನೆ ತಾ ಕೂಗಿದರೆ ಕಡು ಮೆಚ್ಚುತಿಹರು (Sp.). — ಪೊಡವಿವೆಣ್. -ಪೆಣ್. the woman earth (Śśv. 3, 28 va.).

**ಪೊಡಸು poḍasu.** = ಪೊಡಯಿಸು, etc. to cause to beat; [to attack]. [Tu.]. (C. Bp. 47, 22).

**ಪೊಡೆ poḍe.** 1. = (ಪುಯ್, etc.), ಹೊಡಿ, ಹೊಡೆ. to strike, to beat, to smite; to cast, to throw, as a stone; to shoot, as an arrow; to fire, as a gun; to drive, as cattle, etc.; to drive, as a cart, a plough, etc.; to drive away, as birds; to fall plentifully or pour, as rain; to fall, as a thunderbolt; to smite, as a demon, fever, etc. (ಪ್ರಹರಣ Śmd. Dh.; ತಾಡನ Śm. 90; T. ಪುಡ್ಯೆ; My. as ಹೊಡೆ); to beat off, to drive back, to keep off, to ward off, to prevent, to hinder, etc. (ನಿವಾರಿಸು Śm. 90; ಹಂಯಿಡಿ, ಎಡೆಗೆಡಿಸು, etc., ಪ್ರತಿಹತ Śs.); to cut off, as the head (Bp. 51, 72); to fell, as a tree; to pitch, as a tent; to force into (one's body), to devour (My. as ಹೊಡೆ). [ಪೊಡೆದುದು ಬಿಲ್ಲ ಜೇವೊಡೆಯ ಮಿಱುವ ವೈರಿನರೇನ್ದ್ರರಂ Pb. 1, 99]. ಪೊಡೆವ ಭೇರಿ (Śmd. 201). see Rśv. 6. 10 va., 11 & 30; 8, 102, 113; 13, 64 va. & 95; J. 4, 23; 5, 9, 13, 1; 23, 61. [to knock off, to eat away. ಪೊಡೆವಂ ಕೂಟಂ Pb. 3, 29].

**ಪೊಡೆ poḍe.** 2. beating, etc. ಪೊಡೆಗಲ್. -ಕಲ್. a stone for throwing (in battle, J. 22, 26). — ಪೊಡೆಚಣ್ಡು. = ಪೊಡೆಸೆಣ್ಡು 1 (Grj. 10, 74); = ಪೊಡೆಸೆಣ್ಡು 2 (J. 23, 19). — ಪೊಡೆಸೆಣ್ಡು. game of throwing and catching handballs (ಅಮ್ಮಾಲೆ Śs.). [ಬಟ್ಟಿಳ ಸೆಣ್ಡು ಪೊಡೆಸೆಣ್ಡಿನ್ನಿವನಾಡುತ್ತಿರ್ದವನೆಲೆದರ್ Pb. 2, 30]. 2, game of making a ball bounce repeatedly from the ground by hitting it with the palm of the hand (My.).

**ಪೊಡೆ poḍe.** 3. = ಹೊಟ್ಟೆ 2, etc. ಹೊಡೆ 6. the belly, etc. (ಕುಕ್ಷಿ Śmd. Dh.; ಉದರ Ct. I, 102, Bhn, 58; ಜಠರ Ct. II, 46; ಬಸಿಱ್ Kk. 32; ಪೊಟ್ಟೆ, ಬಸಿಱ್ Śm. 70; ಬಸಿಱ್ 90; Rśv. 5, 120 va.; Śśv. 4, 79; J. 2, 9; 11, 9). 2, pregnancy (of beasts, ಗಬ್ಬ Śm. 101). 3, a pregnant ear of corn: an ear of corn just before shooting forth (My. as ಹೊಡೆ; see M. ಪುಟ್ಟಿಲ್ s.

ಪೊಟ್ಟು); a plump ear of corn (ಕೊರ್ಬುತೆನೆ Śm. 90). see ಅಲರ್ವೊಡೆಯ, ಕಿಟ್ಟೊಡೆ, ಪೆರ್ಬೊಡೆಯ, ಪೊನ್ನೊಡೆಯ. — ಪೊಡೆ ಮರಳ್. the belly to be turned (upwards, J. 21, 43). — ಪೊಡೆ ಯಲರ. -ಅಲರ್-ಆ 3. Viṣṇu (ಪಸುವರ್ಣಣ್ಣ Ct. II, 31). 2, a class of metrical feet (Ch.).

**ಪೊಡೆ poḍe. 4.** ಹೊಡ 2, ಹೊಡೆ 4. extension, height, length, stature (see Te. ಪೊಡಗು, etc. s. ಪುಗ್ಗು). — ಪೊಡೆಗೆಡೆ. -ಕೆಡೆ. to fall to one's full length (or headlong, Grj. 5, 42 va.; J. 4, 46; 20, 52; 21, 47; 22, 33).

**ಪೊಡೆ poḍe. 5.** (*cf.* Tbh. ಪೊಡ 1). a pouch formed by folding or doubling a part of one's cloth in front (ಸೋಗಿಲ್, ಉಡಿಲ್, ಮಡಿಲ್ Śm. 71; see ತೆರೆಪೊಡೆ). 2, the part of an arrow that is taken hold of by an archer in shooting. see ಕೆಯ್ಪೊಡೆ.

**ಪೊಡೆಯಿಸು poḍeyisu.** = ಪೊಡೆಯಿಸು, etc. to cause to beat. (Rśv. 6, 10 va.).

***ಪೊಡೆವಡು poḍevaḍu.** = ಪೊಡಮಡು. to salute with folded hands. ಬನ್ದು ಪೊಡೆವಟ್ಟು ಕಣ್ಡೆನ್ತನ್ದಂ Pb. 5, 37; Ap. 2, 67 va.

**ಪೊಣ poṇa.** = ಪಿಣ, etc. a metal. see ಕಾರ್ಬೊಣ.

**ಪೊಣರ್ poṇar. 1.** = ಪೊಣರು, (ಪೋರ್ 1). to be joined or united, to join, to couple (Cpr. 8, 44 va.; Tu. ಪುಣೆ, ಪೊಣೆ; T., M. ಪುಣರು; in M. = ಪೊಣು, see ಪೊರ್ 2; M. ಪುಣೆ, to copulate; to undertake; see ಪೊಲ್ 1). 2, to close or grapple with (an enemy), to fight [ಎರೆದನ ಪೆಮ್ಮುವೇಟೆಯ್ದೊಡನಲಂ ಪೊಣರ್ವಾತನ ಪೆಮ್ಮುವೇಟೆಯ್ದೊಡಾ ಸುರಪತಿ Pb. 5, 73]; (Rśv. 13, 86 va.; Śśv. 2, 42; 4, 72. 117. 125; J. 4, 34; 7, 54; 12, 33. 36). P. p. ಉಣರ್ದು. ಆರ್ ಮೆಯ್ದೋರ್ಪರ್? ಆರ್ ನಿಲ್ಪರ್? ಆರ್ ಪೊಣರ್ಪರ್? (Śmd. 183). see ಮುಪ್ಪೊಣರ್.

**ಪೊಣರ್ poṇar. 2.** (= ಪೋರ್ 2). union, coupling; a couple [ತಪನಕರಂ ತನುಗಳನುರ್ಚೆ ಪೋಗೆ ಸಾರ್ದತ್ತು ಚಕ್ಕವಕ್ಕಿಯ ಪೊಣರುಂ Ap. 11, 50]; (ಅವುಳ್, ಜುಗವು, ಜವಳ, ಎರಡು Kk. 60; ಅವುಳ್ Ct. II, 23; Abh. P. 15, 78; T. ಪುಣರ್; M. ಪುಣರ್, ಪುಣೆ, ಪೊಣ್; Tu. ಪೊಣಕ್ಕೆ, a pair; T.; T. ಪುಣೈ, ಪುಣ್ಯೆ, fetters). 2, a fight, a combat (ಕೊಳುಗುಳ, ಬಣ್ಡಣ, ಜುದ್ದ, ಮೊನೆ, ಕಾಳಗ Śm. 39; Kk. 41). see ಕಣ್ಪೊಣರ್. — ಪೊಣರ್ವಕ್ಕಿ. -ಪಕ್ಕಿ. the ruddy goose (ಚಕ್ಕವಕ್ಕಿ, ಎಣೆವಕ್ಕಿ, etc., ಚಕ್ರವಾಕ Śm. 28; Kk. 14).

**ಪೊಣರು poṇaru.** = ಪೊಣರ್ 1. ಪೊಣರುವ (J. 22, 29).

**ಪೊಣರ್ಕೆ poṇarke.** = ಪೊಣಕೆ. fighting; a fight (Abh. P. 13, 138; 16, 4 va.; Rśv. 5, 128; Śśv. 4, 86). ಕೌರವಾರಿ ಗದೆಗೊಳೆ ಪೊಣರ್ಕೆಗೆ ಆವಂ ನಿಲ್ವಂ? (Śmd. 200).

**ಪೊಣರ್ಚು poṇarcu.** to join, to be joind, united or mixed; to join [ಸೋಂಕಿನೊಳೊಯ್ಯನೆ ಮೆಯ್ಪೊಣರ್ಚೆ Pb. 3, 82]; (with accusative, ಸಂಯುಗ, ಬೆರೆ Śmd. Dh.; Abh. P. 11, 9; 14, 158 va.).

**ಪೊಣೆ poṇe** = ಹೊಣೆ. bond, bail; a bondsman, a surety, a bail (J. 23, 64; Tu.; Te. ಪೂಟ; see T., M. s. ಪಣೆ; *cf.* ಒಲ್ 2). see ಕಾಲ್ಪೊಣೆ, ಕೋಟಬುಪ್ಪೊಣೆ.

**ಪೊಣ್ಮಿಸು poṇmisu.** to cause to rise or swell, etc. (Cpr. 5, 4; Grj. 4, 98).

**ಪೊಣ್ಮು poṇmu.** = ಉಣ್ಮು, (ಪುಣ್ಮು). ಹೊಮ್ಮು. to rise; to swell; to spring up; to break out, to come forth; to be produced (ಉದ್ಗಮನ Śmd. Dh; see Kk. s. ಎಚ್ಚು 1; see s. ಪುಗ್ಗು; *cf.* ಪೊದಳ್ 1). [ಬಗೆಯೊಳ್ಪೊಣ್ಮೆ ದಯಾರಸಂ Ap. 1, 5]. ಪೊಣ್ಮುವ ಘರ್ಮಜಲಂಗಳ್ (Śmd. 201). ಪೊಣ್ಮಿತ್ತು ಬೃಂಹಿತಂ (Abh. P. 10, 157). ಮೆಯ್ ಪುಲಕದಿಂ ಪೊಣ್ಮೆ (J. 11, 19). see Cpr. 1, 51. 86; 2, 7; 3, 56; 8, 94; Abh. P. 14, 106; 16, 37; Grj. 3, 111; 4, 86; Rśv. 5, 36; 9, 22; 10, 6; 13, 84; Bp. 27, 4. 71; 42, 15; 51, 59; C. Bp. 44, 29; J. 6, 40; ಪೊಣ-.

**ಪೊತ್ತ potta.** a treasure-bag (Mhr., H. ಪೋತೀಂ; Te. ಪೊತ = ಪೊಟ್ಲ, see s. ಪೊವ 2). ಕೆಯ್ಪೊತ್ತಂ (a small bag, a purse) ಬಿದ್ದಯ್ದುದವರನ್ತೆ (Śāstrasāra in W. v. 1321).

**ಪೊತ್ತಗೆ pottage.** Tbh. of ಪುಸ್ತಕ. a book [ಎನ್ನುವನ್ತೆವೊಲಿರ್ದಂ.... ಶಾಸನಂ ಬರೆದ ಪೊತ್ತಗೆಯನ್ತಮುರಾಪಗಾತ್ಮಜಂ Pb. 11, 46]; (Śmd. 355). see ಮಾನಸವೊತ್ತಗೆ; V. 38, 98 va.

**ಪೊತ್ತಱ್ pottaṟ.** = ಪೊತ್ತಱೆ, etc. day-time (Abh. P. 8, 60; 10, 94).

**ಪೊತ್ತಱೆ pottaṟe.** = ಪೊತ್ತಱ್, ಪೊಟ್ಟಱೆ, etc. day-break; at day-break; etc. (ನಸಿ Ct. I, 19; ಪಗಲ್ Ct. II, 34).

**ಪೊತ್ತಿ potti.** (= ಪೊತ್ತಿಯ?). Tbh. of ಪೋತ?. cloth (Bp. 31, 3; 55, 25; Te. integument, coat, skin, bark; T. a garment of fibres; T. ಪುನಿಱು = ತೋಲ್; *cf.* ಉದೆ. 1?). see ವಾರಾಣಸಿಯದ ದಸರಿಯ-.

**ಪೊತ್ತಿಗೆ pottige.** flaming, flame (J. 13, 12).

**ಪೊತ್ತಿಗೆ pottige.** Tbh. of ಪುಸ್ತಕ. (Bp. 2, 48).

**ಪೊತ್ತಿಯ pottiya.** (= ಪೊತ್ತಿ ?). (Tbh. of ಪತ್ರೋರ್ಣ?). wove silk (ಪತ್ರೋರ್ಣ, ಧೌತಕೌಶೇಯ Hlā.).

**ಪೊತ್ತಿಸು pottisu.** = ಪತ್ತಿಸು 2, ಹಚ್ಚಿಸು 1, ಹಚ್ಚು 2-, ಹತ್ತಿಸು 2, ಹೊತ್ತಿಸು 1. to cause to burn with flame, to kindle, to light. ಸೊಡರಂ ಪೊತ್ತಿಸಿ (Abh. P. 3, 149). [ತ್ರಿಪುರಮ್ಪೊತ್ತಿಸಿದನ್ತೆ ಪೊತ್ತಿ ಪೊಗೆದತ್ತತ್ತಂ ವಿಯನ್ಮಣ್ಡಳಂ Pb. 11, 17; Ap. 12, 102. ಹರಿಬಲದಿಂ ಪಾಣ್ಡವರನುವರಮಂ ಪೊತ್ತಿಸಿದರೆನ್ದೊಳ್ Pb. 10, 6], ಬನಮಮ್ಪು ಮದನನೃಪನರಮನೆಯೊಳ್ ಪೊತ್ತಿಸಿದ ದೀಪಮಾಲೆಯ ಪಾಡಕ್ಕನುರೂಪಮಾಗಿ ಪಣೆಯಿಂ ಕೊನೆವರೆಗಂ ಪೂತುವು, ಅರರೆ, ಚಮ್ಪಕನಿಕರಂ (Cpr. 7, 53). see Grj. 4, 70 va.; Bp. 3, 6; 16, 22; 27, 7; 50, 53. 59.

**ಪೊತ್ತು pottu. 1.** = ಪತ್ತು 5, ಹತ್ತು 4, ಹೊತ್ತು 1. to begin to burn with flame, to be kindled, to catch fire, to flame [ಬೞಲ್ದು ಜೋಲ್ದಳಿಪಿ ನೋಡಿದಳಿನ್ನಲೆ ಸತ್ತಪೊತ್ತ ಕಣ್ಣಱಯದ ಬೆಳ್ಪನಲ್ಲನೞಚಂ ಧನಳಾಕ್ಕಿಯ ನೋಟದನ್ದಮುಂ Pb. 4, 76]; (Grj. 4, 116; J. 11, 31; 26, 13); (and in the *transitive* sense, ಅಗ್ನಿಪಟೂಕರಣ Śmd. Dh.; ಇಂಗಳವ ಪಟುಮಾಡು Śm.). [ದೇವ ನಿನ್ನನರ್ಚಿಸುವ ನೋಟ್ಪ ಬಣ್ಣಿಸುವ ಪೊತ್ತದೇಕಾಂಗದಿನ್ದ್ರನನ್ತನಗೆ ಸಾಲವಿನ್ನೆರಡೆ ಕೆಯ್ಕುರಜ್ಜಣ್ಗಳೊನ್ದೆ ನಾಲಗೆಯುಮನ್ದೆ ಚಿನ್ತಿಸುವೆನಾದಿ ಭಟ್ಟಾರಕಾ Ap. 13, 89].

**ಪೊತ್ತು pottu. 2.** = ಪೊಟ್ಟು, etc. flaming. 2, the sun. 3, time (Cpr. 4, 28; 6, 86; Bp. 41, 23; J. 28, 24). — ಪೊತ್ತುಗಳೆ. -ಕಳೆ. to spend time (Cpr. 2, 57 va.; J. 26, 55; 32, 30). — ಪೊತ್ತುಂಗೊಳ್ಳಿ. -ಂ-ಕೊಳ್ಳಿ. (Śmd. 203). a flaming piece of wood. — ಪೊತ್ತುವೆಳಗು. -ಬೆಳಗು. time and light (J. 2, 16).

**ಪೊತ್ತು pottu.** 3.=ಹತ್ತು 5, ಹೊತ್ತು 3. to be burnt, as rice, etc., at the bottom of the cooking vessel, to be boiled or baked too much, to be overdone (ಅತಿಪಕ್ವಾನ್ನ Śmd. Dh.; ಅತಿಪಕ್ವ Śm. 97; V. 9, 74; *cf.* ಪುರಿ 1).

**ಪೊತ್ತು pottu.** 4.=ಹೊತ್ತು 5. P. p. of ಪೊಱ್, ಪೊಱು.

**ಪೊದಕುಳಿ podakuḷi.** =ಹೊದಕುಳಿ. affliction, pain, grief, distress. (Te. ಪೊಕ್ಕು, to be blistered, scalded; to grieve much; ಪೊಗಲು, to burn; to grieve; T. ಪೊದಿರ್, fear, trembling through fear). — ಪೊದಕುಳಿಗೊಳ್. -ಕೊಳ್. to begin to grieve, etc. (J. 19, 12).

**ಪೊದಕೆ podake.** =ಹೊದಕೆ, ಹೊದಿಕೆ, (ಹೊದ್ದಿಕೆ). a cover, a covering, a wrapper (thrown over oneself especially at night, My. as ಹೊದಕೆ). [Tu. ಪುದಕ್ಕೆ]. 2, a thatch, a roof (J. 17, 23). ಮನೆಗೆ ಏಱಿಸಿದ ಪೊದಕೆ (ವಲಭಿ, ಛದಿ Mr. 200).

**ಪೊದೆದು podadu.** P. p. of ಪೊದೆ 1.

**ಪೊದೆಯಿಸು podayisu.** =ಪೊದೆಯಿಸು, etc. (Cpr. 7, 92 va.; 8, 4 va.).

**ಪೊದೆಱ್ podar̤.** =(ಪೊದೆ 2 No. 3), ಪೊದಱು, ಹೊದಱು. that covers: a bush, a thicket, a thick tuft of trees (ಕುತ್ತುಱ್ Ct. II, 90; Kk. 22; Śm. 24; ಗಿಡಗಳ ಗುಮ್ಪು G.; My.; Tu. ಪುದೆಲ್, T. ಪುದರ್, ಪುದಲ್, ಪೊಡು, ಪೊಚ್ಚೈ, ಪೊಜ್ಜೈ; *cf.* ಪುದುವು). [ಭೂತಳಂ ಪಾಸು ಮೃಗವ್ರಜಂ ಪರಿಜನಂ ಪೊದಱೋಲಗಸಾಲೆ Pb. 7, 29]. ಮರ ಗಿಡು ಬಳ್ಳಿ ಪುಲ್ ಪೊದಱ್ (Śmd. 89. 113. 129). ಕಮ್ಮಂಗಣೆ ಮಿನ್ದೆ ಚ್ಚಪನ್, ಇಮ್ಮಾವಿನ ಪೊದಱೊಳ್ ಇರ್ದು (210). ಪೊದರ್ಗಳ್ (J. 28, 47). see Cpr. 7, 91; Śśv. 4, 23; J. 2, 57; ಪೆರ್ಪೊದಱ್. [— ಪೊದರ್ತೊದಳ್. -ತೊದಳ್. sonorous utterance, voice?. ಪೊದ ರ್ತೊದಳೆಚ್ಚೆದಿಕ್ಕೆ ದನ್ನೆ ಸುತಿಯೊಳ್ ಸಮನಾಗಿರೆ Pb. 7, 88]. — ಪೊದರ್ವರೆ. -ಪರೆ. bushes, etc. to abound (J. 26, 33).

**ಪೊದಱು podar̤u.** =ಪೊದಱ್, etc. [ಭಟ್ಟಾರಾ! ಇನಿತು ದಿವಸಂ ಮರಂಗಳ ಪೊದಱುಗಳ ಮಱೆಗಳೊಳೀ ಪೊಱಲಂ ಕಣ್ದೆಂ Vr. 89, 29]. — ಪೊದಱುವೆಳಗು. -ಬೆಳಗು. clustered light (J. 10, 36).

**ಪೊದಲ್ podaḷ.** 1. (to rise): to come forth (ಪೊಱಪೊಣ್ಮು Ct. II, 75. 90; *cf.* ಪುಟ್ಟು 1); to spring up; to become conspicuous, famous or well-known, to come in sight (ಪ್ರಸಿದ್ಧವಡೆ Śmd. 7. 56 Cm.; ಪ್ರಸಿದ್ಧವಾಗು 31 Cm.); to have currency, to be used or employed (ಪೊರ್ದುಗೆಯಾಗು 147 Cm.). [ರತಿಯ ಸೋಲದ ಕೇಳಿಕೆಯೊಳ್ ಪೊದಱ್ದು Pb. 1, 4; Ap. 7, 91]. ಕಲಾಗುಣಂ ಪೊದಟ್ಟುದವಡೆ ಬಾಲಭಾವದೊಳ್ ಭಾವಕಿಯರ್ ಬಳೆ ವರ್ ನಿರನ್ತರಂ (230). ಭುವನಮನ್ ಅವಗಂ ಪರಿದು ತೀವಿದ (ಚನ್ದ್ರಸ) ತಣ್ಗದಿರ್ಗಳ್ ಪೊದಟ್ಟು, ಕೈರವವನಮ್ ಅದುವು, ಅಯ್ದೆ ಪೊಸ ಮಲ್ಲಿಗೆ ಯಾದುದು (Lilv. 3, 7). ಭೃಂಗಕಿಶು... ಕಿಱುಮುಡುಗೊಣ್ಡ ಬಣ್ಣನೊಳ ಗೀಸಿ, ಪೊದಱ್ದುದಿದಿರ್ದ ಕುತ್ತಿಸಳ್ಗುಱುವದೊಳ್ ಅಯ್ದೆ ಮೆಯ್ಗರೆದು (Cpr. 7, 60). see Cpr. 2, 14; 4, 46; 5, 64 va.; Abh. P. 1, 103; 6, 49; Rśv. 6, 23; 7, 17; 9, 18; J. 6, 46; 8, 18; Rām. 1, 8, 3.

**ಪೊದಲ್ podaḷ.** 2.=ಪೊದಟ್ಟು. P. p. of ಪೊದಲ್ 1. — ಪೊದಟ್ ತರ್. to manifest itself, to appear (Cpr. 4, 48).

**ಪೊದಲ್ಕೆ podaḷke.** arising; appearing; conspicuousness [ತೇಜದ ಪೊದಟ್ಕೆಯಿಂ ಜನದ ಮನಮನಲೆದಂ ಕರ್ಣಂ Pb. 12, 53; Ap. 4, 64]; (Śśv. 1, 34; 5, 14). — ಪೊದಟ್ಕೆಗುನ್ದು. -ಕುನ್ದು. to disappear (Cpr. 4, 46). [— ಪೊದಟ್ಕೆವಡೆ. to become conspicuous. ಬನ್ದು ಜನ ಮನೋರಥಂಗಳೊಡನೆ ಪೊದಟ್ಕೆವಡೆದ ವೃತ್ತೋರು ಸ್ತಮ್ಭಂಗಳುಂ Ap. 3, 9 va.].

**ಪೊದಟ್ಟು podaḷcu.** to bring about, to perform Cpr. 6, 831.

**ಪೊದಿಸು podisu.** =ಪೊದಯಿಸು, ಪೊದೆಯಿಸು, ಹೊಚ್ಚು, ಹೊದಸು, ಹೊದಿಸು. to put over; to put on; to cover; to hide. see Rśv. 4, 14; 6, 10; J. 28, 4. 20.

**ಪೊದುಂಕು podunku.** to hide (ಅಡಗಿಸು Ś s.).

**ಪೊದೆ pode.** 1.=(ಪುದಿ 1), ಹೊದಿ, ಹೊದೆ 1. to put on; to put over; to wrap round [Tu. ಪುದೆ]; (see T., M. s. ಪುದಿ 1). P. ps. ಪೊದದು, ಪೊದೆದು, ಪೊದ್ದು. ಪೊದೆದಿಹ ರನ್ನಗಮ್ಬಳಿ (Bp. 3, 26). ಪೊದವ ಉತ್ತರಾಸಂಗ (ಶಾಟಿ, ಬೃಹತಿಕೆ, ವೈಕಕ್ಷ Mr. 256). ಪೊದೆದ ಪಾವಡೆ (Si. 224).

**ಪೊದೆ pode.** 2.=ಪುದೆ, etc. a quiver (ದೊಣೆ Ct. I, 37, o. r. ಪುದೆ; ದೊಣೆ, ಬತ್ತಳಿಕೆ, ಮೂಡಿಗೆ Śm. 43; Cpr. 6, 37; 7, 44; Abh. P. 9, 164; Rśv. 6, 11 va.; Te. ಪೊತ, a packet, a little bag). 2, a thatch (ಕುಟುಂಗಳ Si. 490). 3, a bush (My.; Te.). ಬಳ್ಳಿಗಳ ಗುಮ್ಪುಳ್ಳ ಪೊದೆ (ಗುಲ್ಮಿನಿ, etc. Si. 121). 4, a bundle (My.). — ಪೊದೆಗಟ್ಟು. -ಕಟ್ಟು. to prepare a quiver or quivers (Cpr. 5, 53). — ಪೊದೆಗೆದಱು. -ಕೆದಱು. to scatter about (the contents) of a quiver (Cpr. 8, 4 va.; Abh. P. 1, 118).

**ಪೊದೆಯಿಸು podeyisu.** =ಪೊದಿಸು, etc. to put on; to cover; to hide [Tu ಪುದೆಪ್ಪಾವು]; (ಆಚ್ಛಾದನ Śmd. Dh.).

**ಪೊದ್ದಿಸು poddisu.** =ಹೊದ್ದಿಸು 1. to join or put to; to order to do (J. 5, 9).

**ಪೊದ್ದು poddu.** 1.=ಹೊದ್ದು 1. P. p. of ಪೊದೆ 1. ಪೊದ್ದ ಅಂಗವಸ್ತ್ರ (ಪ್ರಾವಾರ, etc. Si. 224). ಪೊದ್ದು ಕೊಳ್ (Grj. 4, 109).

**ಪೊದ್ದು poddu.** 2.=ಪೊನ್ದು 1, etc. (J. 10, 16; 22, 24; 23, 7; 28, 37). ಕುತ್ಸಿತಂ ಪೊದ್ದದೆ (18, 39). ಪೊದ್ದಿದ ಅಪವಾದ (18, 49).

**ಪೊನ್ pon.** (Śmd. 59).=ಪಿಣ, etc., ಪೊಂ-, (ಪೊಱ್-), ಪೊಂ-, (ಪೊಙ್-), ಪೊಮ್ 1-, ಹೊಂ- (ಹೊಱ್-), ಹೊನ್, ಹೊನ್ನು, ಹೊಮ್ 1-, ಹೆಮ್ 1-. metal; gold (ಪರುಷ Mr. 515; M.; Te. ಪೊನ್ನು; T. ಪೊನ್, ಪೊಱ್, metal; gold; lustre; beauty; ಪೊಲ, gold; beauty; M. ಪೊಲ್, gold; see ಪೊಲ್). *cf.* ಪೊಗರ್. ಮಿಸುನಿಯ ಪೊನ್ (ಕಸವರ Śmd. II). ಪೊನ್ನುಳ್ಳವನೆ ಕುಲೀನಂ ಚೆನ್ನಂ ಕಲಿ ಸತ್ಯವಾದಿಯೆನಿಸುಗುಮ್, ಅದಱಿನ್ದಿನ್ನುಂ ಪೊನ್ನನೆ ಪಡೆವುದು; ಪೊನ್ನಿಂ ಸಮನಿಸುಗುಮಲ್ತೆ ಪೆಣ್ಣುಂ ಮಣ್ಣುಂ (84. 174). ಪೊನ್ನಂ ಬಡ್ಡಿಗೆ ಕೊಟ್ಟಂ (165). ಪೊನ್ನ ಕೋಲ್ (162). ಪೊನ್ನ ಮೞೆ (Abh. P. 3, 142). ಪೊನ್ನ ಕೊಪ್ಪರಿಗೆ (Bp. 58, 57). ಪೊನ್ನ ತಮ್ಬುಗೆ (58, 68). ಪೊನ್ನ ನೇಗಿಲ್ (60, 50). ಪೊನ್ನ ಪೂ (4, 38). ಪೊನ್ನ ಪೇಟೆ (Rśv. 13, 72). ಪೊನ್ನ ಬತ್ತಳಿಕೆ (6, 11 va.). ಪೊನ್ನ ಪೊದಕೆ (J. 17, 23). ಕೊಡು, ಕೊಡು ಷೆಟ್ಟಿಗೆಯ ಪೊನ್ನೆಲ್ಲವಂ 1 (Bp. 11, 3). see ಕಾರ್ಪೊನ್, ಕಿಸುಪೊನ್, ಚೆಮ್ಪೊನ್; Cpr. 1, 131. [a gold coin. ಮತ್ತಮಲ್ಲಿ ಕೋಟಿಪೊಂಗೆ ಘನ್ನೆಯಲುಗುವ ಕಿಱುಕುಳ ಬೊಜಂಗರುಮಂ Pb. 4, 87 va.]. — ಪೊನ್ನಡಕೆ. a golden spittoon (Śśv. 1, 78). — ಪೊನ್ನಟ್ಟೆ. -ತಟ್ಟೆ. a golden platter (J. 11, 7. 11). — ಪೊನ್ದಣ್ಡಿಗೆ. a golden palankeen (Bp. 50, 16). — ಪೊನ್ದಳಿಗೆ. -ತಳಿಗೆ. a golden plate (Śśv. 2, 42 va.; J. 31, 18; 33, 23). — ಪೊನ್ದಳಿರ್. -ತಳಿರ್. gold-coloured young foliage (Cpr. 7, 115 va.). — ಪೊನ್ದಱ್. -ತಱ್. a golden parasol (V. 5, 21 va.). — ಪೊನ್ದಾವರೆ. -ತಾವರೆ. a gold-

coloured lotus [ಈ ಪೊರ್ಕುೞಿ ಪೊನ್ದಾವರೆವೂಕ್ಕು ನೇಣವಂ ಬರ್ದುಕುವನೇ Pb. 11, 121]; (Rśv. 10, 31 va.; J. 3, 8; 8, 4). — ಪೊನ್ದಾವರೆಗೊಳ. -ಕೊಳ. a pond with gold-coloured lotuses (Abh. P. 1, 104). — ಪೊನ್ದೆನೆಗೊನೆ. -ತೆನೆ-ಕೊನೆ. the point of a gold merlon of a fort (Cpr. 1, 112). — ಪೊನ್ದೆರೆ. -ತೆರೆ. a golden veil (Rśv. 5, 19 va.; 10, 6). — ಪೊನ್ದೇರ್. -ತೇರ್. a gilt chariot (C. Bp. 42, 15; J. 12, 4; 22, 8). — ಪೊನ್ದೊಡರ್. -ತೊಡರ್. a gold chain (Rśv. 6, 11 va.; 13, 70). — ಪೊನ್ದೊಡವು. -ತೊಡವು. a gold ornament (J. 12, 7). — ಪೊನ್ದೊಡಿಗೆ. -ತೊಡಿಗೆ. a gold trinket (J. 28, 17). — ಪೊನ್ನನ್ದಣ. -ಅನ್ದಣ. = ಪೊನ್ನನ್ದಳ. (J. 31, 13. 30). — ಪೊನ್ನನ್ದಳ. -ಅನ್ದಳ. a golden palankeen (Śmd. 75). — ಪೊನ್ನನ್ದುಗೆ. -ಅನ್ದುಗೆ. a gold anklet (Bp. 14, 15). — ಪೊನ್ನಱೆ. -ಅಱೆ. a golden stone-slab (Grj. 3, 110). — ಪೊನ್ನೊಡೆಯ. -ಒಡೆಯ. Kubēra (ಕುಬೇರ Kk. 16; ಕಿನ್ನರಪತಿ Śm. 13). — ಪೊನ್ನೊರೆ. -ಒರೆ. equality to gold (Abh. P. 9, 177). — ಪೊನ್ನೋಲೆ. -ಓಲೆ. a golden palm-leaf, an ear ornament made of gold (Grj. 3, 82; Bp. 11, 43).

**ಪೊನಲ್ ponal.** = ಹೊನಲ್. a stream, a river (ಪುರ Śm. 102; Abh. P. 9, 30; 13, 46; J. 12, 8; 31, 57; T. ಪುನಲ್; M. ಪುಣಲ್, ಪುನಲ್; T. ಪುೞಲ್, any thing which is hollow; a drain, water-course, see ಪುರೆ). [ಪರಚಕ್ರ ಭೂಪರಟ್ಟಿದ ಕರಿಗಳ್ ಬಿಡುತರ್ಪ ಪೊನಲಿನ್ದೆತ್ತಂ Kr. 3, 182; Pb. 1, 92; Ap. 1, 64]. ಗಱಗಱನೆ ಗುಱುಗುಱುಮೆನುತುಂ ಪರಿವಪೊನಲ್ ಸೊಗಯಿಸುಗುಂ (Śmd. I). ಗುಱುಗುಱುಗಱಗಱಯೆನುತುಂ ಪರಿವಪೊನಲ್ ಸೊಗಯಿಸುಗುಂ (65). see ಕಾಟ್ಪೊನಲ್, ಬೆಳ್ಪೊನಲ್. — ಪೊನಲಿಡು. -ಇಡು. to form a stream (J. 25, 35). — ಪೊನಲ್ಪರಿ. -ಪರಿ. to flow in streams [ಈ ನಾಟ್ಯರಸಂ ಸಮಸ್ತ ಸುರನ್ಸನ್ನಾಥೀಶನಿನ್ದಂ ಪೊನಲ್ಪರಿವತ್ತಿಮ್ಪಿನಂ Ap. 7, 119]; (Rśv. 8, 124; J. 19, 37). — ಪೊನಲ್ಪರಿಯಿಸು. -ಪರಿಯಿಸು. to cause streams to flow (Rśv. 8, 112).

**ಪೊನ್ದು pondu. 1.** = ಪೊರ್ದು 1, etc. to join, etc. (ಪೊರ್ದುಗೆ Śm. 98; Cpr. 2, 24; Śśv. 4, 135; Te. ಒನ್ದು, ಪೊನ್ದು). see ಅಡಕಿಲ್ಪೊನ್ದು.

**ಪೊನ್ದು pondu. 2.** = ಪೊರ್ದು 2. union, concourse, collection (C. Bp. 2, 4).

**ಪೊನ್ದು pondu. 3.** = ಹೊನ್ದು 2. to die (ಮರಣ Śm.; T. ಪೊನ್ದು; Te. ಒಲಿ, ಪೊಲಿ, ಪೊಲೆ, to die; to perish; M. ಪೊಲಿ, to be extinguished).

**ಪೊನ್ನ pon-a₃.** = ಹೊನ್ನ (s. ಹೊನ್). N. of a Kannaḍa author (Cpr. 1, 66).

**ಪೊನ್ನೆ ponne.** = ಹೊನ್ನೆ, q. v. the tree Tarminalia tormentora, W. & A. (Te.; see ಕೋಲ-, s. ಕೋಲು).

**ಪೊಪ್ಪಳಿ poppaḷi.** = ಪಪ್ಪಳಿ, etc. poplin cloth. (My.; Te.).

**ಪೊಪ್ಪಾಯ poppāya.** = ಪಪ್ಪಾಯಿ, etc. the Papaya. (St. & Pl.).

**ಪೊಪ್ಪಿಳಿ poppiḷi.** a diffuse shrub yielding a yellow dye, Morinda umbellata Lin. (St. & Pl.).

**ಪೊಪ್ಪುಕ poppuka.** = ಪಪ್ಪುಕ, q. v. beating the bushes in hunting.

**ಪೊಪ್ಳಿ popḷi.** = ಪೊಪ್ಪಳಿ, etc. (My.).

**ಪೊಮ್- pom. 1.** = ಪೊನ್, etc. gold. — ಪೊಮ್ಪಕ್ಕರಗೆ. -ಪಕ್ಕರಗೆ. gilt armor or gear (Cpr. 10, 78). — ಪೊಮ್ಪಟ್ಟ. -ಪಟ್ಟ. a golden frontlet, etc. (J. 2, 28). — ಪೊಮ್ಪಟ್ಟಲ್. a golden cup (V. 9, 71 va.; J. 15, 45. 46). — ಪೊಮ್ಪಟ್ಟೆ. gold-coloured silk-cloth (Bp. 11, 26; Rśv. 8, 5 va.; 13, 69; J. 14, 27). — ಪೊಮ್ಪಣ್ಣ. gold-colour, a reddish or brown colour [ಇತ್ತ ಬನ್ನಿರಿಮಮ್ಪ ಪೊಮ್ಪಣ್ಣದ ಕೋಗಿಲೆಗಳುಮಂ Pb. 1, 115 va.; Ap. 1, 60]; (ಪಸುರುಂ ಕರಿದುಂ ತನ್ಮೊಳ್ ಐಕ್ಯವರ್ಣ Ct. II, 67; ಕವಿಲೆವಣ್ಣ Śm. 69, Kk. 26; J. 3, 6; Śśv. 1, 68). — ಪೊಮ್ಪರದ. -ಪರದ. a dealer in gold, a money-changer (ಸೊನ್ನೆವರದ Śm. 67; Śśv. 2, 42 va.). — ಪೊಮ್ಪರಿಯಣ. -ಪರಿಯಣ. a plate of gold (V. 5, 61 va.; Śśv. 3, 22). — ಪೊಮ್ಪರಿಯಾಣ. -ಪರಿಯಾಣ. a plate of gold (Rśv. 13, 45 va.). ಪೊಮ್ಪರಿವಾಣ. -ಪರಿವಾಣ. a plate of gold (J. 6, 44). — ಪೊಮ್ಪಸಿಱ. Hiraṇyagarbha, Brahmā (ಬ್ರಹ್ಮನ್ Śs.). — ಪೊಮ್ಪಸುಱ. = ಪೊಮ್ಪಸಿಱ. (ಬೊಮ್ಮ, etc, ಅಜ Ct. II, 3). — ಪೊಮ್ಪಾಸಿಗ. a golden bāsiga (Bp. 4, 40). — ಪೊಮ್ಪಾೞಿ. = ಪೊಮ್ಪಾೞಿ. [ಬಿರಿವ ಪೊಮ್ಪಾೞಿಯ ತಣ್ಮಲೆವ ಪೊಸಗಮ್ಪಿನೊಳ್ Ap. 1, 68]. ಪೊಮ್ಪಾೞಿಯ ಕಮ್ಪುಂಗಳ್ (Cpr. 7, 92 va.). ಸಟ್ಟ ಪೊಮ್ಪಾೞಿಯ ಬಾೞ್ಪಮ್ಪಂಗಳ್ (Rśv. 10, 31 va.). see V. 4, 24; J. 3, 27. — ಪೊಮ್ಬಿಸಿಲ್. gold-coloured or purple sun-shine (Abh. P. 11, 177, Grj. 2, 82; Rśv. 12, 39; J. 1, 3). — ಪೊಮ್ಪುಡಿ. -ಪುಡಿ. gold dust, gold powder (Śśv. 2, 42 va.; J. 33, 22). — ಪೊಮ್ಪುಲಿ. -ಪುಲಿ. a gold-coloured tiger (Rśv. 5, 25 va.; 5, 114, Śśv. 3, 16). — ಪೊಮ್ಬೆಟ್ಟ. = ಪೊಮ್ಬೆಟ್ಟು. (Abh. P. 1, 44; 3, 28; 4, 119). — ಪೊಮ್ಬೆಟ್ಟು. the golden mountain: Mēru (ಸುರಗಿರಿ Śm. 10). — ಪೊಮ್ಬೆತ್ತ. a cane covered with gold, or a gold-coloured cane (Śśv. 1, 79 va.). [— ಪೊಮ್ಬೆಸ. gold work. ಪೊಮ್ಬೆಸದೊಳೆ ಸಮೆದ ಮಕುಟಮಿರ್ಪನ್ನಿರ್ಕುಂ Ap. 7, 61]. — ಪೊಮ್ಬೆಸೆ. gold to be joined or attached (Rśv. 6, 11 va.). — ಪೊಮ್ಬೆಳಗು. gold-coloured light (Grj. 8, 47). — ಪೊಮ್ಬೊಡೆಯ. -ಪೊಡೆಯ. = ಪೊಮ್ಪಸುಱ. (ಬೊಮ್ಮ Kk. 9; ಬ್ರಹ್ಮನ್ Śm. 8). — ಪೊಮ್ಬೊಪ್ಪುಮೀನ್. a sort of fish (Rśv. 5, 115). could it be ಪೊಮ್ಪು (= ಪೊನ್)-ಒಪ್ಪು-ಮೀನ್?. — ಪೊಮ್ಮದಿಲ್. (Śmd. 193 Mdb.). a golden wall. [— ಪೊಮ್ಮಯ. full of gold. ಎರೆದವರ್ಗಿತ್ತು ಪೊಮ್ಮಯದೆ ಮಾಡಿದನೀ ನೆಲನಂ ಗುಣಾರ್ಣವಂ Pb. 14, 21. — ಪೊಮ್ಮರೆ. pon-mare. golden deer. ಪೋಗಿ ಪೊಮ್ಮರೆಯನೆೞ್ಚಿಡೆ ತಪ್ಪಿದಿದಪ್ಪುದೆನ್ದು Pb. 4, 19]. — ಪೊಮ್ಮಱಿ. = ಹೊಮ್ಮಱಿ q. v. a gold-coloured young antelope. ಪೊಮ್ಮಱಿವೋಲ್ ಪೊಳೆದು ಪಾಱಿ ಪೋದಂ ಶ್ವೇತಂ (Śmd. 289; Dp. 101, 3). — ಪೊಮ್ಮೞೆ. a shower of gold (V. 37, 126). — ಪೊಮ್ಮಾಡ. a golden building (V. 4, 88). — ಪೊಮ್ಮುಗಿಲ್. a gold-coloured cloud (Cpr. I, 111).

**ಪೊಮ್- pom 2.** = ಹೊಮ್ 2-, increasing, swelling, rising (see ಪೊಂಗು 1) *cf.* ಹೊಪ್ಪಳ. — ಪೊಮ್ಪುೞ. (a sort of reduplication). increase, growth; greatness [ಕಣ್ಣನೀರ್ ಸುರಿಯೆ ಚಿನ್ತಿಪ ಪಾರ್ವನ ಶೋಕದೊನ್ದು ಪೊಮ್ಪುೞಯನೆ ನೋಡಿ ನಾಡೆ ಕರುಣಂ ತನಗಾಗಿರೆ Pb. 3, 25]; ಪೆರ್ಚುಗೆ Śmd. I, Ct. I, 106; ಪಿರಿದು Kk. 49, o. r. ಸೊಮ್ಪುೞ; ಪೆಮ್ಪು, etc., ಅಧಿಕ Śm. 58; ಪಿರಿದು 111; Cpr. 2, 14; 6, 48; 7, 118; Te. ಬೊಮ್ಬರಿ; T. ಪೊಮ್ಮಲ್, increase = ಪೊಲಿವು; plenty; ಪೊರುಮು, ಪೆರಮು, to be swelled; ಪುರ್ಶೈ, height; T., M. ಪೊಲಿ, Te. ಪೊರೆ, to be accumulated; to be elevated; to increase). 2, erection of the hairs of the body (ಪುಳಕ Ct. I, 105; II, 9; Kk. 31; Śm. 76. 111). — ಪೊಮ್ಪುೞವೋಗು. -ಪೋಗು. to feel elated [ವಿದ್ಯಾಧರೀ ರಮ್ಯನರ್ತನರಾಗೋತ್ಥಿತ...ನಿಸ್ವನದೊಳ್ ಪೊಮ್ಪುೞವೋಗುತಿರ್ಪುವೆರಡುಂ ವಿದ್ಯಾಧರ ಶ್ರೇಣಿಗಳ್ Ap. 1, 70]; (V. 14, 56).

**ಪೊಮ್ಮು pommu.** a tax on tobacco (My.).

**ಪೊಯ್ poy 1.** = ಪುಯ್, etc. to beat, etc.; to pour; to cast (ತಾಡನ Śmd. Dh.; ನೋಯಿದು Kk. 59; *see the meanings of*

2, = ಬಯಲಾಗು No. 2. (My.). — ಬಯ್ಲಿಗೆ ತೆಗೆ. to make public (My.; B. 5, 175). — ಬಯ್ಲಿಗೆ ಬರು. to come to light, to appear (My.). ನಮ್ಮ ಮೂಢತನ ಮಾತ್ರ ಬಯ್ಲಿಗೆ ಬರುತ್ತದೆ (B. 4, 49). — ಬಯ್ಲಿಗೆ ಹಾಕು. = ಬಯಲಿಗೆ ಹಾಕು. (B. 5, 173. 280; My.). ಗುಪ್ತವನ್ನು ಬಯ್ಲಿಗೆ ಹಾಕುವವ (ಮರ್ಮಸ್ಪೃಶ್ G.). — ಬಯ್ಲುಉಡ. a land-iguana. (Si. 89). — ಬಯ್ಲುಕಡೆ. = ಬಯಲ್ಕಡೆ. (My.). — ಬಯ್ಲುಗಮ್ಮಾಱ. -ಕಮ್ಮಾಱ. a blacksmith who puts up outside a village, a travelling smith (B. 2, 12). — ಬಯ್ಲುಬೂಮಿ. an open plain (My.). 2, a public privy (My.). — ಬಯ್ಲುಸೀಮೆ. an open country, a plain (B. 4, 122; My.).

**ಬಯ್ಸು baysu.** = ಬಯಿಸು 2. to cause to abuse, etc. (My.); to cause oneself to be abused, etc. (with ಕೊಳ್, My.). ಬಯ್ಸಿಕೊಂಡವನು (ಆಕ್ರೋಶಿತ, ಕ್ರೋಶಿತ, ಅಭಿಶಸ್ತ Nr.). [ಭಟ್ಟಾರಾ ನಿಮ್ಮಂ ಪಂಚಮಹಾಪಾತಕನ ಮನೆಗೊಡಗೊಂಡು ಪೋಗಿ ಬಯ್ಸಿದೆಂ...ಈ ಅಪರಾಧಕ್ಕೆನಗೆ ಕ್ಷಮಿಯಿಸುವುದು Vr. 8, 3]. ಬಯಕೆ ಕೊಟ್ಟರೂ ಬಯ್ಸಿಕೊಮ್ಬುದು ತಪ್ಪಲಿಲ್ಲ (Prv.).

**ಬರ್ bar.** 1. = ಬರು q. v., ಬಾ, ಬಾರ್ 1 No. 1. to come; to arrive (ಆಗಮನ Śmd. Dh.); to arrive at; (to take place, to happen). 2, to accrue (to any one, etc.), to fall to the share (of any one), to be gotten; (anything) to come into and be in the possession (of any one so as to understand and use it), to become an acquisition. 3, (any thing) to be a matter of possibility (for any one to do, etc.), to be possible. 4, (the bodily members) to be at (one's) command or under (one's) control (so as to have the use of them). 5, to be becoming, fit, suitable, useful, befitting, proper, or advisable, to be allowed, permitted, or unobjectionable (especially in ಬಹುದು and in the negative ಬಾರದು). 6, suffice for. [Tu.]. P. p. ಬನ್ದು (Śmd. 280); present ಬನ್ದಪಂ, ಬನ್ದಪೆಂ, etc. (280. 281). [ನಿನ್ನ ಕೆಳೆಯಂ ಬನ್ದಪ್ಪನಾತಂಗೆ ಬೆಮ್ಬುಲಮಿನ್ನೀಂ ನಿನಗಾತಂ Pb. 4, 30]. ಬನ್ದಹಂ (Bp. 8, 8); present relative participle ಬರ್ಪ (Śmd. 259. 293), ಬಪ್ಪ (Bp. 61, 28), ಬಹ q. v., ಬಾಹ q. v.; future ಬರ್ಪಂ (Śmd. 275), ಬರ್ಪುದು (93), ಬರ್ಕುಂ (177. 185), ಬಪ್ಪಂ (Bp. 47, 21), ಬಪ್ಪುದು (36, 56); ಎಲ್ಲಿಗೆ ಹೋದರೂ ಮನೆಗೆ ಬಪ್ಪ (Prv.): ನಾಡಿಗಿಬ್ಬರು ಅರಸರಾದರೆ ಕೇಡು ಬಪ್ಪದು ತಪ್ಪದು (Prv.); also ಬರ್ಕುಂ, ಬಕ್ಕು (Śś s. ಬಡೆಗೋಲ್), ಬಹುದು q. v.; 3rd person singular neuter of the imperfect ಬನ್ದುದು, ಬನ್ದತ್ತು; ಬನ್ದಿತು (My.; Dp. 126, 1), ಬನ್ತು; imperative singular ಬರ್ಕೆ (Śmd. 269), ಬಾ, q. v., ಬಾರ್, q. v.; imp. plural ಬನ್ನಿಂ (281 Cm.), [ಇತ್ತ ಬನ್ನಿಮಿರಿವೊಮ್ಬು ಪೊಮ್ಬಣ್ಣದ ಕೋಗಿಲೆಗಳುಮಂ Pb. 1, 115 va.]. ಬನ್ನಿ (Bp. 4, 4; 21, 22; 24, 30; 51, 80; 59, 16; My); ಬನ್ನಿ! ಎನ್ದರೆ ಪನ್ನಿ ಹೆಚ್ಚು (Prv.); ಬನ್ನಿರಿ (Bp. 32, 17; 56, 30; My.); negative participle ಬಾರದೆ (Śmd. 282), exceptionally ಬರದೆ (Bp. 44, 10; B. 5, 52. 299; My.); [ನರಪತಿ ಬನ್ದನಾ ನೃಪನನಟ್ಟುಯೆ ಕಾಣ್ಬುದು Kr. 1, 115]; ಸಂಗಡದಿಂ ಬನ್ದಂ (Śmd. 157). ವಸನ್ತದೊಳ್ ಮಾವು ಬನ್ದುದು (163). ಒನ್ದು ದಿವಸದೊಳ್ ಬನ್ದಂ or ಒನ್ದು ದಿವಸಂ ಬನ್ದಂ (167). ನಗುತುಂ ಬನ್ದಂ (280). ನದಿ ಬನ್ದುದು (187, came down in a flood). ಪೋದ ವರ್ತಿಪ ಬರ್ಪ ಕಾಲತ್ರಯಂಗಳ್ (259). ಬೇಡಲ್ಕೆ ಬನ್ದಂ (278). ಈಯಲ್ ಬನ್ದತ್ತು ಕಲ್ಪಾಂಘ್ರಿಪರ್ ಅಭಿಮತಮಂ (64. 277). ಪಿನ್ದೆ ಬರ್ಪುದು (ಬೆನ್ನಟ್ಟಿಱು I). ಸುತ್ತಿ ಬರ್ಪುದು (ಸುಲ್ಲಱು I). ಆನೆ ಬೀದಿಯಲಿ ಬರೆ ಸೋಣ ತಾ ಬೊಗಳುವದು (Sp.). ಆಡುಪರೆ ಬರ ಹೇೞು (Bh. 2, 13, 34). ಉರ್ವಿ ಬರ್ಪ ತೆರೆ (Rśv. 2, 59). ಮುನ್ದೆ ಏಂ ಬರ್ಪುದೊ? (13, 20). ಬರ್ಪುದೆನ್ ಈಶಂ ಬಲ್ಲಂ (13, 101). ಏಂ, ಪೆರ್ಮೆಗೆ ಹಾನಿ ಬರ್ಪುದೆ? (13, 21). ಈ ತರುಣನಲ್ಲಿನ್ದ ಬನ್ದಂ? (J. 28, 26). ನಿಜಪುರಕೆ ಬರುತಿರ್ದನು (28, 57). ಬನ್ದು ಕುನ್ತಲನಗರಿಗೆ (29, 19). ಕುನ್ತಲಪುರದ ಬಾಹ್ಯೋಪವನಕೆ ಬರಲು (29, 44) ಬನ್ದ ಕಾರ್ಯಮಂ (the business for which he came) ತನಗೊರೆವುದೆನ್ದು, ಮದನಂ ಚನ್ದ್ರಹಾಸನಂ ಕೇಳ್ದೊಡೆ (30, 49). ಮನ ಬನ್ದನ್ತೆ ನುಡಿವ ನುಡಿ (ಕೋಲಾಹಲ, etc.); ಹಾರ ಗುಚ್ಛ ಅರ್ಧಗುಚ್ಛ ಗೋಪುಚ್ಛ ಎಮ್ಬಿವು ಕ್ರಮದಿನ್ದಂ ಕುನ್ದುತ್ತುಂ ಬರಲಪ್ಪುವು (Hlā.). ಯಜ್ಞಶಾಲಾರಕ್ಷಣಾರ್ಥಮಾಗಿ ಸುತ್ತು ಬರಲಿಕ್ಕಿದ ಬೇಲಿ (ಕುಮ್ಬೆ Nr.). ಬಿನ್ದುವಿಂಗೆ ಬನ್ದುದಲ್ಲದ ನಿಜಮುಕಾರಂ (Śmd. 127 Cm.). see Śmd. 93. 177. 281; Cpr. 2, 59 va.; Bp. 38, 54; 48, 8; 60, 26; Bh. 1, 10, 24. 26; 1, 19, 19; 2, 13, 7; J. 8, 2; 15, 3; 17, 1; 28, 20; 29, 40; ಎಡವಲವರ್, ಕಣ್ಣವರ್, ದೊರೆವರ್, ದೊರೆಗೆವರ್, ಬಲವರ್, etc. — ಬರ್ ಬರ್. rep. (Bp. 52, 22; 40, 3). — ಬರ ಬರ್. = ಬರೆವರ್. (Bp. 19, 35; 61, 24). [— ಬರಬರ. rep. gradually. ಬರಬರಭಕ್ತಿ ಅರೆಯಾಯಿತ್ತು ಕಾಣೆರಣ್ಣಾ Bv. 220]. — ಬರಲಾಗು. -ಆಗು. = ಬರ್ No. 1. (Bp. 40, 48). 2, = ಬರ್ No. 5. (Bh. 1, 8, 27). — ಬರವೇೞ್. -ಪೇೞ್. to tell or order to come (Śmd. 293; Cpr. 2, 53va.; Bp. 53, 74; 58, 29). — ಬರ ಸೆಳೆ. to draw so as to come, to draw towards oneself (Bp. 21, 42; 22, 15; Rām. 4, 1, 23; J. 28, 55). ಬರ ಸೆಳವ ಕೆಯ್ (ಆಕರ್ಷ Mr. 297). see Śmd. s. ಎೞ್ 1; J. 11, 27; Rām. 6, 53, 11. — ಬರೆ ತೆಗೆ. = ಬರ ಸೆಳೆ. (Abh. P. 3, 79). — ಬರೆವರ್. -ಬರ್. to come onward, to continue coming (Rśv. 10, 31 va.; 13, 88 va.). — ಬಾರ್ 1. = ಬಾರ್ 1 No. 2. lengthened base used to form the *negative* (ಬಾರೆಂ, etc., ಬಾರದು, etc., ಬಾರದೆ). meaning of the negative forms: not to come, etc. ನೃಪಂ ಬೆಪ್ಪಿಟ್ಟಂ ಮೂಡಟ್ಟೆಯುಂ ಬಾರಂ (Śmd. 283). ಬಾರದು (ವ್ಯವಹರಿಸದು 68 Cm.). ಭವಿಷ್ಯನ್ತಿಯ ವಕಾರಕ್ಕೆ ಇದಾಗಮಂ ಬಾರದು (259 Cm.). ಭೂತಕಾಲದ ದಕಾರಂ ಬಾರದು (292 Cm.). ಯಜ್ಞದಲ್ಲಿ ಹೆಚ್ಚು ಕಡಿಮೆ ಬಾರದನ್ತೆ ಸರಿ ನೋಡುತ್ತಿರುವ ಋತ್ವಿಕ್ಕು (ಸದಸ್ಯ Si. 237). ದನಗಳು ಬಾರದನ್ತೆ ಸುತ್ತಲೂ ಗೂಟಗಳು ನೆಟ್ಟಿಲ್ ಪಟ್ಟಿ ಗುಱು (ಕುಕೂಲ 457). ಭೂಗಗನಪಾತಾಲದ ಅರಮನೆಗಳ್ ಇವಱೊಡನೆ ತೂಗೆ ಸರಿ ಬಾರವು (C. Bp. 5, 52). 2, not to accrue, etc. ಅ ಆ ಬಾರದಿದ್ದರೆ (if a and ā are not known to him) ಅಮರನಾದರೂ ಹೇೞಿಸ್ವನ್ನೆ. — ಪದ ಬಾರದಿದ್ದರೆ ಮದ ಹೋದೀತೇ? — ಮನೆ ಮನೆ ತಿರುಗುವನಗೆ ಮಾತು ಬಾರದೆ ಬಿಟ್ಟೀತೇ? — ಬಾರದ ಬರಹ (a writing that is unknown to them) ಹರದರಲ್ಲಿ ಸಿಕ್ಕೀತೇ? (Prvs.). ಎಣಿಕೆ ಬಾರದ ಮನುಜ ಕರಣೀಕನಹನೆ ಏನು? (Dp. 167). 3, not to be possible, etc., (to be very difficult). ಉಚ್ಚರಿಸಲ್ ಬಾರದುವು ಅಕ್ಕರಮಲ್ತು (Śmd. 10). ಚನ್ದ್ರನಂ ಕಾಣಲು ಬಾರದ ಅಮಾವಾಸ್ಯೆ (ಕುಹು Hlā.). ನೆಲೆಗಾಣ ಬಾರದುದು (ಅಗಾಧ); ಹೋಗ ಬಾರದ ಬಟ್ಟೆ (ಕಾನ್ತಾರ, ದುರ್ಗ); ಸೊಗಸುವುದಾಗಿ ಅಱಿಯ ಬಾರದ ಧ್ವನಿ (ಕಲ); ಹೋಗ ಬಾರದುದು (ಗಹನ, ಕಲಿಲ Nr.). ಕಾಣ ಬಾರದೇ ಹೋಗುವಿಕೆ (ಅಸ್ತ, ಅದರ್ಶನ Si. 475). ಲೆಕ್ಕಿಸ ಬಾರದು (ಪ್ರಸೂನ, ಅಸಂಖ್ಯಾತ Nn. 25); ಲೆಕ್ಕಿಸ ಬಾರದುದು (ಕೋಟಿ, ಅಗಣಿತ 43); ಹೋಗ ಬಾರದನ್ತಾದು (ಅಕ್ಷರ, ಅಸಂಗತ 75), ಗೆಲ ಬಾರದುದು (ಅತರ್ಕ್ಯ 88. 90). ತೆಱೆಯ ಬಾರದು (ad No. 4) ಕಣ್ಣು, ಮುಱಿದು ಕಣ್ದೆಱೆಯೆ ದಿಕ್ಕಱಿಯ ಬಾರದು (J. 4, 10). ತಿದ್ದ ಬಾರದ ತೇಜಿ ಉದ್ದ ಮಾಗಿರಲೇನು? (Dp. 148). ಸುಂಗ ಬಾರದ ತುತ್ತೂ ತುಟಿ ಮೀಱಿದ ಹಲ್ಲೂ ಸಮ (Prv.). see B. 2, 9. 4, not to be becoming, etc. ಇವು ಬೆರಳು ಕೊರಳೆಮ್ಬನ್ತೆ ಕುಳನಾಗಿ ಉಚ್ಚರಿಸ ಬಾರದು (-ಉಚ್ಚರಿಸಲಾಗದು Śmd. 41 vṛitti). ಅಲ್ಲಿ ಬಹುಲಸ್ಥಿತಿಯಂ ಪರಿಹರಿಸಲ್ ಬಾರದು (77). ಮಾಡ ಬಾರದು (ದುಷ್ಕರಂ 190 Cm.). ಸುರಿಗೆ ಮೊದಲಾದುದು ಕೆಯ್ಯಿಂ ಬಿಡಲ್ ಬಾರದು (ಅಮುಕ್ತ Hlā.). ಮನಕ್ಕೆ ಬಾರದುದನೊಡಮ್ಬಡುವಲ್ಲಿ ಕಾಮುಮೊಮ್ಬು ಅನ್ವಯಂ ನೆಗಳ್ಗು (Nr.). ತನ್ನಿಚ್ಚೆಗಂ ಬಾರ

ಪಡದು (ಹರಣ, ತನ್ನಿಚ್ಛೆಗೆ ಬಾರದ ಕಾರ್ಯಂ Nn. 165). ಪೇಟಿ ಬಾರದ ಬೊಡಿಲು (ಅವಾಚ್ಯ Si. 59). ಮಾಡ ಬಾರದ ಕೆಲಸ (ಕಟು 414; ಕೌಪೀನ 437). ಎಲ್ಲರಿಗೂ ಕಾಣ ಬಾರದೆ ಇರುವ ಅರಸಿನ ಅನ್ತಃಪುರ (ಶುದ್ಧಾನ್ತ 423). ಕೆಲಸಕ್ಕೆ ಬಾರದ ಮುಪ್ಪುಳ್ಳ ಮುಕ್ಕ (ಅಕರಣ 401). ಬಿಟ್ಟಿಯಾಳು ಆದರೆ ಹಟ್ಟಿ ಕಟ್ಟ ಬಾರದೇ?— ಬಿಡಿಸುವವನ ಸಂಗಡ ಬಿಗಿ ಮಾಡ ಬಾರದು. — ಬುಧವಾರವಾದರೆ ಯಾಯವಾರ ಇಕ್ಕ ಬಾರದೇ? — ಬುರುಜು ಇಲ್ಲದಿದ್ದರೆ ಕುರುಜು ಆದರೂ ಕಟ್ಟ ಬಾರದೇ? — ಬೇಡಿ ಕೊಣ್ಡು ತಿನ್ನ ಬಹುದು, ಕದ್ದು ಕೊಣ್ಡು ತಿನ್ನ ಬಾರದು. — ಮಂಕಿ ಮಗನಾದರೆ ಸುಂಕ ಕೊಡ ಬಾರದೇ? — ಮಣ್ಡೇ ಮೇಲೆ ಹಾಕಿದ ನೀರು ಕಾಲಿಗೆ ಬಾರದೇ?— ಮಚ್ಚೆ ನಾಲಿಗೆ ಇದ್ದವನ ಸಂಗಡ ಕಚ್ಚಾಟ ಮಾಡ ಬಾರದು. — ಮುಟ್ಟಿ ತಿಳಿದವನ ಜೆಟ್ಟ್ಯಾಟ ಮಾಡ ಬಾರದು.— ಮುಟ್ಟಿ ತಿಳಿಯದೆ ಮಾತಾಡ ಬಾರದು. — ಮುಪ್ಪಾದ ಮೇಲೆ ಮೂಜು ದಿನವಿರಬಾರದು. — ಲಗ್ನಕಾಲಕ್ಕೆ ವಿಘ್ನ ಮಾಡ ಬಾರದು.— ಸೇವಕರಿಗೆ ಲಾವಕತನವಿರ ಬಾರದು. — ಮಾಡ ಬಾರದ್ದು ಮಾಡಿದರೆ ಆಗ ಬಾರದ್ದು ಆಗುವದು. (Prvs.). ಈ ಪುಸ್ತಕದ ಮೇಲೆ ಮಸೀ ಚೆಲ್ಲ ಬಾರದು;...ಧ್ವನಿ ತೆಗೆದು ಓದ ಬಾರದು; ಓದುವಾಗ ಅವಸರ ಮಾಡ ಬಾರದು, ತಡ ಮಾಡಿ ಓದ ಬಾರದು (B. 2, 1). ಹುಡುಗರು ಹದಿನಾಱು ವರ್ಷದವರಾಗುವ ತನಕ ಸ್ವಬುದ್ಧಿಯಿನ್ದ ನಡೆಯ ಬಾರದು;...ಸಾಲೆಗೆ ಹೋಗುವದನ್ನು ತಪ್ಪಿಸ ಬಾರದು;...ದಿನಾಲು ಏನಾದರೂ ಹೊಸದಾಗಿ ಕಲಿಯದೆ ಹೊತ್ತುಗಳೆಯ ಬಾರದು;...ತುಣ್ಟ ಹುಡುಗರು ಕರೆದರೆ ಅವರ ಕೂಡ ಆಡಲಿಕ್ಕೆ ಹೋಗ ಬಾರದು (1, 12. 13). ತುಡುಗು ಮಾಡ ಬಾರದು (2, 29). ಸಣ್ಣ ಪ್ರಾಣಿಗಳನ್ನು ಪೀಡಿಸ ಬಾರದು (2, 42). ಅಂಗಿಯನ್ನು ಇಟ್ಟು ಕೊಳ್ಳ ಬೇಕೋ? ಇಟ್ಟು ಕೊಳ್ಳ ಬಾರದೋ? (4, 93). 5, not to be at (one's) command etc. ಕೆಯ್ ಕಾಲು ಬಾರದವನು (My.). for instances from the Bp. see s. ಬಾರ್ 1 No. 2. ಬಾರ್ 2. lengthened base used also for the *affirmative* mood; see ಬಾರ್ 1 No. 1.

**ಬರ್ bar.** 2. coming, etc.: that from which comes. see ಕಿಸುರ್ಪರ್.

**-ಬರ್ bar.** 3. -ಬರು. = -ಮ್ಬರ್. -ವರ್. an affix for the masculine and feminine plural, *e. g.* ಇರ್ಬರ್, ಪಲಬರ್, ಕೆಲಬರ್, ಅಸಿಬರ್, ಇಸಿಬರ್, ಎಸಿಬರ್ (Śmd. 122. 123).

**ಬರ bara.** 1. = ಬರವು (Śmd. 56). coming, etc. [ಕೂಡಲ ಸಂಗನ ಶರಣರ ಬನ್ದಬರವ ನಿನ್ದ ನಿಲವ ಅಸಂಗಸಂಗಿಗಳೆತ್ತ ಬಲ್ಲರು? Bv. 125]. see Rśv. 5, 114 va.

**ಬರ bara.** 2. = ಬರದು, ಬರೆದು. short P. p. of ಬರೆ 1, in ಬರ ಕೊಳ್ಳು (B. 3, 49; 5, 303; My.).

**ಬರ bara.** = ಬರೆ, ಪರಿ 1, ವರೆ 1. Tbh. of ವರ. compass, space, room: limit; up to, till (*cf.* T., M. s. ಬರವು). [ಜನಸೂ ಪಾಣ್ಡುರನೂಪಾ ನೃಪರೊಳಾರಾ ಪಾಣ್ಡುರಾಜಂ ಬರಂ Pb. 1, 110; Ap. 2, 50 va.]. ಆಯುಃಕ್ಷಯಪರ್ಯ್ಯನ್ತಂ (Śmd. 94); ಪರಮಾಯುಷ್ಯಾಸ್ತಮ್ಬರಂ (128). see ಅಸ್ಮಬರ; Abh. P. 13, 62. 64; Śsv. 1, 54. 2, a boon, etc. [ಬರಮುಮಗೀಗೆ ದೇವತೆಗಳಾದರದಿಂ Kr. 1, 116; Pb. 7, 74]. — ಬರ ಪಡೆ. -ಂ-ಪಡೆ. to obtain a boon (Cpr. 5, 123). ಬರಮ್ಬಡೆವನ್ನೆಗಮ್ ಆರಾಧಿಸಿದಂ (Śmd. 295).

**ಬರಕತ್ತು barakattu.** success, happy termination; successfulness; overplus (My.; Br.; Mhr., H.).

**ಬರಕಿ baraki.** = ಬರಿ 1. the side, the flank, etc. — ಬರಕಿ ಯೆಲುವು. a rib (B. 3, 123; Mhr. ಬರಗಡೀ).

**ಬರಖಾಸ್ತು barakhāstu.** risen, broken up, as an assembly (My.; Br.; Mhr., H.).

**ಬರಗ baraga.** = ಬರಗು. ಬರಗದ ಅನ್ನ ತಿನ್ನುವವ ಹೊರಿಗೆ ಬಯಸಿದ ಹಾಗೆ (Prv.).

**ಬರಗು baragu.** = ಬರಗ. a kind of grain, Paspalum frumentaceum (My.; T., M. ವರಗು). 2, Indian millet (ಪ್ರಿಯಂಗು Mr. 374; Sk. ವರುಕ, a species of inferior grain; Mhr. ಬರಗಜ, millet). 3, a kind of hill grass of which writing pens are made (My.). — ಬರಗುಕಡ್ಡಿ. (ಕತ್ತೃಣ, ಪಾತ್ರ, etc. Si. 165); a pen of ಬರಗು (My.).

***ಬರಗೆಲೆ baragele.** a kind of ornament. ಸುರಗಿಗಿವು ಲಪ್ಪು ನಕ್ಕಿವು ಬರಗೆಲೆಗಿವು ಮುಗುಳ್ಗಲೆಮ್ಮ ಪೋಱುಲೆಗಿವು Ap. 7, 68.

**ಬರಂಗಿ barangi.** the papaw tree, Carica papaya L. (St. & Pl.).

**ಬರಡು baraḍu.** = ಬಱಡು, etc. bareness, etc. — ಬರಡು ಕುಮ್ಭ. an empty pot (Bp. 9, 27).

**ಬರಣಿ baraṇi.** (ಭರಣಿ). a small box, a casket, a China jar or vase (ಸಮುದ್ಗಕ, ಸಮ್ಪುಟಕ Si. 231; G.; My.; Bp. 12, 12; J. 6, 22; Te.; M. ಪರಣಿ, ಬರಣಿ; T. ಪರಣಿ; Mhr, ಬರಣೀ). ಬರಣಿಯಾದರೆ ಕರಣಿಕ ಮಾಡ್ಯಾನೇ? (Prv.). see Prv. s. ಅರಣಿ.

**ಬರತರಫ಼ು barataraphu.** dismissed, discharged; dismissal (My.; Br.; Mhr., H.).

**ಬರತಿ barati.** Tbh. of ಭರ್ತಿ. full, complete, etc. (My.).

**ಬರತಿದಾರ barati-dāra.** a merchant who has bandy-loads conveyed from one place to another (My.).

**ಬರದಾಸ್ತು baradāstu.** hospitable entertainment (of a guest, etc., Mhr., H.). 2, pardon (My.).

**ಬರದು baradu.** = ಬರೆದು. P. p. of ಬರೆ 1.

**ಬರಪ barapa.** = ಬರಹ. writing, etc. (Abh. P. 9, 157).

**ಬರಪು barapu.** = ಬರವು. — ಬರಪಾಡು. -ಆಡು. to announce the arrival (Cpr. 8, 94 va.).

**ಬರಮ barama.** Tbh. of ಬ್ರಹ್ಮ. the god Brahmā. (C.). — ಬರ ಮದೇಶ. Burma (My.).

**ಬರಮಾ baramā.** = ಬಯ್ರಿಗೆ, q. v. a kind of anger, etc. (My.).

**ಬರಲು baraḷu.** = ಬಱಲ್, ಬೊರಲು 1. a broom (My.; *cf.* ಪರಕೆ 2).

**ಬರವಣಿಗೆ baravaṇige.** writing (ಲಿಪಿ, ಲಿವಿ Si. 261; My.).

**ಬರವಸ baravasa.** = ಬರಾಸ, ಭರವಸ. confidence, trust, etc. (Bp. 12, 49; My.). 2, perseverance, persistance (Te.; see ಬರವಸಿಗ).

**ಬರವಸಿಗ baravasiga.** (ಭರವಸಿಗ). an active, industrious, strenuous man (ಕ್ರಿಯಾವತ್, ಕರ್ಮಸೂದ್ಯುಕ್ತ Hlā.; ಉದ್ಯುಕ್ತ Mr. 230).

**ಬರವಿಕೆ baravike.** = ಬರುವಿಕೆ. coming, etc. (My.).

**ಬರವಿಗ baraviga.** a man that is to arrive, an arrival (Cpr. 8, 61 va.).

**ಬರವು baravu.** (ಬರ್-ಅ-ವು Śmd. 247). = ಬರ 1 (56), ಬರಪು. coming; arrival [ಪರಮಾನುಭಾವ ಭರಮುಂ ದೊರೆಕೊಣ್ಡುದಿನ್ದು ಬರವಿನೊಳ್ ನಿಮ್ಮಡಿಯಾ Kr. 3, 205; Pb. 3, 28; Ap. 3, 85]; (Cpr. 2, 72; 5, 26; 6, 93; Grj. 4, 40. 41; Bp. 3, 2; 21, 19. 39; 37, 54; 53, 24; 60, 3; Bh. 1, 10, 26; C. Bp. 47, 16; J. 10, 9. 17; My.: T. ವರವು). ನಿಮ್ಮ ಬರವಿನಿನ್ದ ನನಗೆ ಸನ್ತೋಷವಾಯಿತು (My.). ಮಕ್ಕಳು ತಾಯಿಯ ಬರವಿಗೆ ಕಾದಿರುತ್ತವೆ (My.). [—ಬರವೊನ್ದು. -ವೊನ್ದು. to culminate? ನನ್ದನವನ ವಿಭ್ರಮಣವಲ್ಲಿ ಸರೋವರ. ದೀರ್ಘಿಕಾಮ್ಬು ಮಜ್ಜನಯುತ ಲೀಲೆಯಲ್ಲಿ ಬರವೊನ್ದುಗುಂ Ap. 11, 138].

**ಬರಸ barasa.** (*cf.* ಬರ್ಸನ?). —ಬರಸಗಿಡ. a name applied to several small species of Euphorbia (Z.). see ಸಣ್ಣ-, ಹಿರೇ-.

**ಬರಸು barasu. 1.** = ಬರಿಸು 1. to cause to come (My.). ತೆಂಕಣ ಗಾಳಿ ಮಂಕುಮಜ್ ಬರಸೀತು (Prv.).

**ಬರಸು barasu. 2.** = ಬರಿಸು 2, ಬರೆಯಿಸು, ಬರೆಸು. to cause to write, to have written, etc. (J. 30, 27; Dp. 1; My.).

**ಬರಹ baraha.** = ಬರೆಹ, ಬರಾ, ಬರಾವು, ಬರೆಪ. writing, drawing; writ, scripture, written letters [Tu. ಬರಾವು]; (ಅಕ್ಷರ, ಲಿಪಿ, ಲೇಖನ Mr. 360; My.). ಚಿತ್ರದ ಬರಹಮುಮ್ ಅಕ್ಷರದ ಬರಹಮುಂ ಲಿಪಿಯೆಮ್ಬುದು (Hla). ಹೊತ್ತಿಗೆ ಮೊದಲಾದವರ ಬರಹಂ (ಪುಸ್ತ Nr.). ಬರಹದಲ್ಲಿದ್ದ ಕರಿ ಮಜ್ಜೀ ಹಾಕೀತೇ? — ಬರಹ ಬಲ್ಲವನಾದರೂ ತರಹರಿಕೆ ಇರ ಬೇಕು. — ನೀರಲ್ಲಿ ಬರದ ಬರಹಾ್ ಹಾಗೆ. — ಸೊಸಲಿನ ಬರಹ ಬಸಲೆಯಿನ್ದ ಒರಸ ಬಹುದೇ? — ಬಾರದ ಬರಹ ಹರದರಲ್ಲಿ ಸಿಕ್ಕೀತೇ? (Prvs.). see Bp. 3, 42; J. 30, 24. 50; 31, 36; B. 1, 11; 5, 77. 93. 108. 168; ನೊಸಲ-; ಹಣೆಯ-; Prv. s. ರಜಪುತ್ರ.

**ಬರಾ barā.** = ಬರೆಹ. (My.). ಜರಾ ಬನ್ದು, ಬರಾ ಮುಚ್ಚಿತು ಹೋಯಿತು (Prv.).

**ಬರಾಬರ್ barābar.** equal; exact, correct; proper, fit; even (Mhr., H.; My.).

**ಬರಾಬರಿ barābari.** equality; evenness. 2, = ಬರಾಬರ್ (Mhr., H.; Br.; My.).

**ಬರಾಮಣ barāmaṇa.** Tbh. of ಬ್ರಾಹ್ಮಣ. a Brahmin. (C.).

**ಬರಾಯಿಸು barāyisu.** to fill or enter (items into a book. My.; H.).

**ಬರಾವರ್ದು barāvardu.** working out, or the rule of working, arithmetically: a monthly statement of amounts now payable (My.; Mhr., H. ಬರಾವರ್ದ, ವರಾವರ್ದ). 2, a list of public servants (My.). — ಬರಾವರ್ದುದಾರ. a man whose name has been entered into the list of public servants (My.).

**ಬರಾವು barāvu.** = ಬರೆಹ. writing, etc. (My.).

**ಬರಾಸ barāsa.** = ಬರವಸ. confidence, etc. (My.).

**ಬರಿ bari. 1.** = ಬಡಿ 4, ಬದಿ 2, (ಬರೆಕ್ಕಿ). the side, the flank. [ಬರಿಗಳ್ ಮುಱಿಯೆ ತೊಡೆಗಳುಡಿಯೆ Pb. 11, 57]; (Tu. edge; ಪಕ್ಷ, ಮಗ್ಗುಲು Nn. 112; ಪಕ್ಷ Mr. 497; Cpr. 5, 58. 59; 8, 57; Cpr. 9, 92; Bp. 59, 39; Rāv. 5, 55 va.; My.; Te.). ಆನೆಯ ಬರಿ (ಪಕ್ಷಭಾಗ, ಪಾರ್ಶ್ವಭಾಗ); ಬರಿಯ ಅಸ್ಥಿ (ಪರ್ಶುಕೆ); ಬರಿಯ ಎಲುಗಳ ಸಮೂಹಂ (ಪಾರ್ಶ್ವ Nr.). — ಬರಿ ಮೂಳೆ. a rib (My.).

**ಬರಿ bari. 2.** = ಬಱಿ 2, etc. a gift, a present, etc. see ಅಟ್ಟುವ್ಬರಿ.

**ಬರಿ bari. 3.** = ಬರೆ 1. to write. (My.; B. 5, 171; T., M. ವರಿ).

**ಬರಿ bari.** = ಭರಿ. bearing, possessing, etc. — ಬರಿಕೆಯ್. = ಭರಿಕೆಯ್. (Śsv. 4, 3; J. 15, 20). — ಬರಿಕೆಯ್ಬಿಲ. -ಬಿಲ. the hole in an elephant's trunk (Śsv. 3, 58).

**ಬರಿಸ barisa.** Tbh. of ವರ್ಷ. [ಅಱುವತ್ತು ಸಾಸಿರಂಗಳ್ ನೆಱೆವವು ಬರಿಸಂಗಳ್ Ap. 14, 2]; (Śmd. 336 Mdb.; ವರುಷ Śs.; ವರ್ಷ Śm. 20; My.; see Śmd. 73). — ಬರಿಸಕಾಲ. the rainy season (ಕಾರು Śm. 102). [Tu. ಬರ್ಸ rain].

**ಬರಿಸು barisu. 1.** = ಬರಸು 1. to cause to come, etc. [ತ್ರಿಲೋಕಮುಂ ಕನ್ಸು ಬಸಕೆ ಬರಿಸುವನೆನ್ಸುಂ Kr. 3, 122; Pb. 1, 84 va.; Ap. 4, 91]; (Śmd. 71; Cpr. 2, 40 va.; 5, 136 va.; Bp. 10, 7; 20, 30; 24, 65; 37, 35; 44, 70; 50, 26. 64; 53, 13. 27; 59, 25; Rāv. 6, 10 va.; 13, 61 va.; J. 3, 13. 11, 3; 16, 16; My.). ಬರಿಪಂ (Śmd. 275). ಕಪ್ಪೆ ಕೂಗಿ ಮಳೆ ಬರಿಸಿದ ಹಾಗೆ (Prv.). [—ಬರಿಪೆನ್. I will cause to come. ಬರಿಪೆನಮೋಘಮಿಸ್ತ್ರಪವನಾಸ್ತ್ರದಲ್ಲಿಗೆ ನಲ್ಲನಂ Kr. 2, 105. — ಬರಿಪ್ಪೆನ್. = ಬರಿಪೆನ್. ಬರಿಪ್ಪೆಸುರಾಗದ ನಲ್ಲನನಿನ್ನು Kr. 2, 106].

**ಬರಿಸು barisu. 2.** = ಬರಸು 2. to cause to write, etc. (My.). ಪ್ರತಿಗಳನ್ನು ಲೇಖಕರ ಕೆಯ್ಯಿ ಬರಿಸ ಬೇಕಾದರೆ (B. 4, 103).

**ಬರು baru.** = ಬರ್ 1, etc. to come, etc. (My.; T., M. ವರು; Te. ವಚ್ಚು). P. p. ಬನ್ದು. imperative ಬಾ; plural ಬರ್ರಿ (B. 3, 81, My.; ಬನ್ನಿ, ಬನ್ನಿರಿ; see ಬರ್ 1). ಆ ಹೆಂಗಸು ತಲೆಯ ಮೇಲೆ ಏನು ಹೊತ್ತು ಕೊಣ್ಡು ಬರುತ್ತಾಳೆ? (B. 1, 1). ಮುಂಜಾನೆ ಎದ್ದು ಕಲಿತರೆ ವಿದ್ಯೆಯು ಬೇಗ ಬರುವದು; ವಿದ್ಯೆ ಬಾರದೆ ಜ್ಞಾನವು ಬರುವದಿಲ್ಲ, ಜ್ಞಾನವಿಲ್ಲದಿದ್ದರೆ ಮಾನ ಬರುವದಿಲ್ಲ; ಚಿಕ್ಕತನದಲ್ಲಿ ವಿದ್ಯೆ ಬನ್ದ ಹಾಗೆ ದೊಡ್ಡವರಾದ ಬಳಿಕ ಬರುವದಿಲ್ಲ (1, 4). ಬರುವೆನು (2, 26). ಬರುವ ಹಗಲಿನೊನ್ದಿಗೂ ಈಗಿನ ಹಗಲಿನೊನ್ದಿಗೂ ಕೂಡಿದ ರಾತ್ರಿ (ಪಕ್ಷಿಣ Si. 38). ಇನ್ದ್ರಿಯಗಳಿಗೆ ತಿಳಿಯ ಬರುವವಾಗಿ ಅವುಗಳಲ್ಲಿ (ವಿಷಯ 49). ಕಾಯಿಗೆ ಬನ್ದ ಮಗ್ಗು (ಕಲಿಕೆ, etc. 123). ತತ್ಕಾಲದಲ್ಲಿ ವಿಕಸಿತವಾಗ ತಕ್ಕಪುಷ್ಪದವಕ್ಕೆ ಬನ್ದ ಹುವ್ವಿನ ಮಗ್ಗು (ಕುಟ್ಮಲ, etc. 124). ರೋಗದ ದೆಸೆಯಿನ್ದ ಈಚೆಗೆ ಬನ್ದವನು (ನಿರಾಮಯ, etc. 202). ಮುನ್ದೆ ಬರುವ ಸಮಯ (ಆಯತಿ, ಉತ್ತರಕಾಲ 266). ಕತ್ತೆಯ ಪಾಗೆ ಹೊರಳಾಡಿ ಮೇಲಕ್ಕೆ ಎದ್ದು ಬನ್ದ ಕುಮರೆ (ಉಪಾವೃತ್ತ, etc. 274). ಸಂಗದ ಬನ್ದವನು (ಸಹಾಯ, ಅನುಚರ 281). ಯುದ್ಧಾದಿಕೃತ್ಯಗಳಲ್ಲಿ ತನ್ನ ಮುನಸ್ಸು ಬನ್ದನ್ತೆ ನುಗ್ಗಿ ಪೋಗುವ ಸ್ವತನ್ತ್ರನು (ಕಾಮುಂಗಾಮಿ 283). ಅಱುವತ್ತು ದಿನಕ್ಕೆ ಬೆಳಮು ಬರುವ ಚಿಲ್ಲರೆ ಧಾನ್ಯಗಳು (ಶಾಲಿಗಳು 307). ಈ ಹಣ ಮೂಱು ದಿವಸಕ್ಕೆ ಬರುವದು (My.). ಧಾನ್ಯ ಹೆಚ್ಚಿದವನಿಗೆ ಮಾನ್ಯ ಬರುವದು. — ಬರುವವರ ಸಂಗದ ಬನ್ದರೂ ಬಜಿಗಾಲ ತಪ್ಪಲಿಲ್ಲ. — ಮಾತು ಬನ್ದಾಗ ಸೋತು ಹೋದವನೇ ಜಾಣ. — ಮಾತು ಬನ್ದವ ಮಾಣಿಕ ತನ್ದ, ಮಾತು ಅಱಿಯದವ ಜಗಳ ತನ್ದ. — ಬರುವಾಗ ಸರಿಯ ಕಣ್ದರೆ ಕರಕರೆಯಿಲ್ಲ. — ಬರುವಾಗ ಹುಲಿಯ ಹಾಗೆ, ಹೋಗುವಾಗ ಇಲಿಯ ಹಾಗೆ. — ಬಲಿ ಕೊಡವನ ಬಲಕ್ಕೆ ಬನ್ದಾನೇ? — ಬಾಧ್ಯನಾದರೂ ಸ್ವಾಧೀನ ಬರಲಿಲ್ಲ. — ಪಾಚೀ ಹಣ್ಣು ಬಣ್ಣಕ್ಕೆ ಬನ್ದೀತೇ? — ಬಣ್ಡೆಯ ಮೇಲೆ ಕೂತರೆ ಬಣ್ಣ ಬನ್ದೀತೇ? — ಬನ್ದದ್ದು ಬರಲಿ ಬಣ್ಡಹಳ್ಳಿಸುಂಕ! — ಬನ್ದದೆಲ್ಲ ಬರಲಿ! ಗೋವಿನ್ದನ ದಯ ನಮಗಿರಲಿ! (Prvs.). ತಿಳಿಗೇಡಿ ಹುಡುಗರು ಯಾವ ಕೆಲಸಕ್ಕೂ ಬರುವದಿಲ್ಲ (B. 1, 18). ಮಾವಿನ ಹಣ್ಣು? ಇವು ನಿನಗೆ ಎಲ್ಲಿನ್ದ ಬನ್ದವು? (2, 35). ಆಕ್ರೋಡದ ಎಣ್ಣೆ ದೀವಿಗೆಗೂ ಉಣ್ಣುವದಕ್ಕೂ ಬರುತ್ತದೆ (3, 115). ಈ ಹಾಲು ನನಗೆ ಬರ ತಕ್ಕದು (4, 12). ಆದಱಿನ್ದ ಲಾಭವಿಲ್ಲನ್ನು, ಕಣ್ಡು ಬನ್ದರೆ (4, 16). ಬಹುತರಮನುಷ್ಯಮಾತ್ರಕ್ಕೆಲ್ಲ ಸ್ವಾಭಾವಿಕವಾಗಿ ಸಿಟ್ಟು ಬನ್ದೇ ಬರುತ್ತದೆ (4, 16). ಮರಣವು ನಿಶ್ಚಯವಾಗಿ ನಿನಗೆ ಇಲ್ಲಿಯೇ ಬರುವದೆನ್ದು, ನನ್ನ ಬುದ್ಧಿಗೆ ತೋಱುತ್ತದೆ (4, 42). ಎರಡು ಆಣೆ ಕೊಡದೆ, ಹೊಸ ಪುಸ್ತಕ ಬರುವದಿಲ್ಲ (4, 44). ತುಟಿಗಳು ಅಲ್ಲಾಡಿಸಲಿಕ್ಕೆ ಬರುತ್ತವೆ (4, 84). ಕರಡಿಗಳಿಗೆ ಮರ ಏಱುವದಕ್ಕೆ ಬರುತ್ತದೆ (5, 258). ಶುದ್ಧ ಬರಿಯಲಿಕ್ಕೆ ಬರಬೇಕು (5, 275). ಒಮ್ಮೊಮ್ಮೆ ಆನೆಯ ಕೋಱೆಗಳು ನಾಲ್ಕೈದು ಪೂಟ ಉದ್ದ ಬರುತ್ತವೆ (5, 238). ಔಷಧಕ್ಕೆ ಬರುವ ಹಿಪ್ಪಲಿ (G. 573). ನನಗೆ ನಿದ್ದೆ ಬರುವದು (4, 155). ಮಕ್ಕಳಿಗೆ ಕೆಯ್ ಕಾಲು ಬನ್ದ ಮೇಲೆ ಎತ್ತೆತ್ತಲು ತಿರಿಗ್ಯಾಡುತ್ತವೆ (My.). ಬಾಯ್ ಬರು (My.). see Prvs. s. ಬಱಿ. — ಬರಗೊಡು. -ಕೊಡು. to allow to come (B. 3, 48. 113). — ಬರ ಬರ. more and more, by degrees, in course of time (My.; T. ವರವರ). — ಬರ ಬರು. to continue coming, as time. ಬರ ಬರುತ್ತ, in course of time, by and by, etc. (My.). ಅವರೀ ಕುಱಿಗಳು ಮನುಷ್ಯರಿಗೆ ಮೊದಲು ಹೆವಱುವಾಗ್ಯೂ ಬರ ಬರುತ್ತ ಈಳಾಗುತ್ತವೆ (B. 3, 10). ಬರ ಬರುತ್ತಾ ಸರ್ವಸಾಧಾರಣಜನರು ಹೊಸ ನಡತೆಗಳನ್ನು ಸ್ವೀಕರಿಸಿದರು (4, 189). see B. 5, 228. — ಬರ ಮಾಡು. to make come, to cause to come (B. 3, 127; My.); to recover, as money or property (My.). — ಬರ ಹೋಗು. = ಬರು ಹೋಗು. to come

and go (My.). ಬರ ಹೋಗುವ ಹಡಗುಗಳು (B. 4, 172). ಬರ ಹೋಗುವವಕ್ಕೆ ಹಾದಿಗಳನ್ನು ಮಾಡಿ (5, 117). ಕುದುರೆಯ ಮೇಲೆ ಇಲ್ಲವೆ ರಥಗಳೊಳಗೆ ಕೂತು ಕೊಂಡು ಬರ ಹೋಗುವವರು (5, 300). — ಬರು ಬರು. rep. to continue coming (My.). ಹಡಗವು ತಂಕೆ ಇಳಿ್ಕೆ ಬನ್ನ ಬನ್ನ ಹಾಗೆ ಧ್ರುವನಕ್ಷತ್ರವು ಕೆಳಗೆ ಇಳಿದದ್ದೆ ಕಾಣುತ್ತದೆ (B. 4, 67). 2, to come one after the other or in crowds. ಬನ್ನ ಬನ್ನವರು ನಿನ್ನಿಸಿದರೆ ಗಣ್ಡ ಸತ್ತ ದುಃಖ ಬಿಟ್ಟು ಹೋದೀತೇ? (Prv.). — ಬರುತ್ತಾ ಬರುತ್ತಾ. = ಬರ ಬರುತ್ತ. (My.). ಬರುತ್ತಾ ಬರುತ್ತಾ ರಾಯನ ಕುದುರೆ ಕತ್ತೆ ಆಯಿತು (Prv.). — ಬರು ಹೋಗು. = ಬರ ಹೋಗು. (My.). ಬರು ಹೋಗುವ ಪಾನ್ಥಸ್ಥರು (B. 4, 155).

***ಬರುಣ್ಟು baruṇṭu.** to shake the body? ಪೊನ್ನ ಪೊಟ್ಟಳಿಗೆಯಂ ತನ್ನೆಯ ಮಱಲುನ್ದಿದಲ್ಲಿಗೆವೋಗಿ ಬರುಣ್ಟೆ ಎಚ್ಚು ಪೊಟ್ಟಳಿಗೆಯಂ ತನ್ದೆಗೆ ಕೊಟ್ಟಳ್ Vr. 17, 23.

**ಬರುವಿಕೆ baruvike.** coming, etc. (Si. 380. 392-394. 341).

**ಬರೆ bare. 1.** = ಬರಿ 3. to write; to draw (ವಿಲೇಖನ Śmd. Dh.; ಲಿಖಿಸು 5 Cm.; My.; T. ವರೈ, M. ವರೆ; Te. ವ್ರಾ); [Tu. ಬರೆವು]. P. ps. ಬರೆದು [ಬರೆಯದೆ ಬನ್ದ ಸುದ್ದಗೆಯೆ ಸೂತ್ರಮನೊನ್ದೆ ಮುಹೂರ್ತಮಾತ್ರದಿಂ ಬರಸಿದುದು Pb. 2, 34; Ap. 3, 32 va.]; (Śmd. 5; Cpr. 2, 47; 5, 125), ಬರದು (Bp. 46, 13; 50, 36). ಬರೆದುದು (Śmd. 264). ಬರೆದಪಂ or ಬರೆದಪ್ಪಂ (276). ಬರೆಯಲುಮ್ ಉಚ್ಚರಿಸಲ್ ಬಾರದು ವಕ್ಕರಂಗಳ್ ಅಲ್ತು (10). ತೋಳು ಮೊಲೆ ಕೊರಳ್ಗಳಲ್ಲಿ ಅನುಲೇಪನದಿನ್ದಂ ಬರೆದ ರೇಖೆ (ಪತ್ರವಲ್ಲಿ Hlā.). ಚಿತ್ರವ ಬರೆವ ಲೆಕ್ಕಣಿಕೆ (ತೂಲಿಕೆ, etc. Nr.). ಬರದ ಚಿತ್ರ (ಚಿತ್ರ Nn. 8. 50); ಬರೆಯದ ಓಲೆ (ಅಲೇಖ 96). ಗಣಕರ್ ಬರೆವ ಗೃಹ (ಕರಣಶಾಲೆ Mr. 197). ಈಕ್ಷಿಸುವ ಭಿತ್ತಿಯೊಳು ಬರೆದ ಚಿತ್ರಂಗಳ್ (ಜ್ವಲಿತಾರಕೆ 201). ಮೊಲೆ ಗಲ್ಲ ತೋಳ್ ಕೊರಳಲ್ಲಿ ತೀವಿ ಸಱಯಿಂ ಬರೆದ ಪವುಸೆ ಲತೆಗಳ್ (ಪತ್ರವಲ್ಲಿ, ಮಕರಿಕೆ 329). ಬರೆಯುವವನು (ಲಿಪಿಕಾರ, ಲೇಖಕ, etc. Si. 271). ಬರೆಯಲ್ ಪಟ್ಟ ಅಕ್ಷರಗಳ ಆಕಾರಸ್ಥಿತಿ (ಲಿಪಿ, etc. 271). ಚಿತ್ತಾರ ಬರೆಯುವವನು (ಚಿತ್ರಕರ, ರಂಗಾಜೀವ 338). ಬಣ್ಣದಲ್ಲಿ ಬರದರೂ ಕಣ್ಣು ಚನ್ನಾಗಿರಬೇಕು. — ಬರದು ತಿಳಿಯದ ಲೆಕ್ಕ ಕಡೆಗೆ ದುಕ್ಕ. — ಬರೆಯದ ಕೆಯ್ಯಿ, ಕರೆಯದ ಬಾಯಿ. — ಬರೆಯಲಾಱದವ ಕುಱು ಕಾಯುವವನಿಗಿನ್ನ ಕಡೆ. — ಬರೆಯಲಿಕ್ಕೆ ಹ್ಯಾಗೂ ಬರೆಯಬಹುದು; ಸುಡೋದು ಹ್ಯಾಗೆ? — ಬರೆಯುವವನ ಸಂಗಡ ದ್ವೇಷ; ದಾಯಾದಿಯ ಸಂಗಡ ಸ್ನೇಹ. — ನಡೆಯುವವ ಎಡವುತ್ತಾನೆ, ಬರೆಯುವವ ತಪ್ಪುತ್ತಾನೆ. — ನೋಡಿ ಬರೆದರೆ ಪರರನ್ನು ತಿನ್ದಿತು, ನೋಡದೆ ಬರೆದರೆ ತನ್ನನೆ ತಿನ್ದಿತು. — ಹೊಯಿಗೇಲಿ ಬರೆದು, ಉದೀಲಿ ಹಾಕಿಕೊಣ್ಡ ಹಾಗೆ (Prvs.). see Bp. 38, 48; 42, 3; C. Bp. 5, 51; Rśv. 6, 11 va.; J. 29, 38; 30, 28. 29; 31, 36.

**ಬರೆ bare. 2.** writing; lines or stripes (made with a hot iron; T. ವರಿ; M. ವರಿ, ವರ್ೖ). — ಬರೆಗುಡ. -ಕುಡ. = ಬರೆಗುಟಿ. (B. 2, 12). — ಬರೆಗುಟಿ. -ಕುಟಿ. an iron used in cauterizing or firing cattle for diseases, lameness, etc. (My.). — ಬರೆಗೋಲು. -ಕೋಲು. = ಬರೆಗುಟಿ. (My.). — ಬರೆಹಾಕು. to apply lines or stripes by cauterizing (My.; B. 2, 12). see Prv. s. ಎತ್ತು 4.

**ಬರೆ bare.** (= ಬರ, etc.). (ಪರ್ಯನ್ತ Śmd. 12; ಪರಿಯನ್ತ ರಂ 11 Cm.). ಳಕಾರಮ್ಬರೆಗಂ (11). ಅಗ್ರಮ್ಬರೆಗಂ (Cpr. 8, 57). see ಅನ್ನ-, ಅಮ್ಬರಮ್-.

**ಬರೆಪ barepa.** = ಬರಹ, etc. — ಬರೆಪಮ್ಬುಗು. -ಂ-ಪುಗು. to enter writ: to be written (ಬರೆವುದಂ ಪುಗು Śmd. 10 Cm.). ಬರೆಪಮ್ಬುಕ್ಕು ಉಚ್ಚರಿಸಲ್ ಬಾರದುವು ಅಕ್ಕರಮಲ್ತು (10).

**ಬರೆಯಿಸು bareyisu.** = ಬರಸು 2, etc. to cause to write. (ಲೇಖನ Śmd. Dh.; B. 5, 304). [ಗರ್ವದೆ ಬರೆಯಿಸಿದಂ ಪೆಸರನಖಿಳ ದಿಗ್ಭಿತ್ತಿಗಳೊಳ್ Pb. 1, 20; Ap. 14, 73].

**ಬರೆಸು baresu.** = ಬರೆಯಿಸು, etc. (J. 31, 33. 35; My.).

***ಬರೆಹಕಾಱ bareha-kāṟa.** a writer. ಗುಣಮಿಲ್ಲದೆ ಪೂಣ್ದು ಪೇೞ್ದ ಬೆಳ್ಗಳ ಕೃತಿಬನ್ಧಮುಮಂ ಬರೆಹಕಾಱರ ಕೈಗಳ ಕೇಡು Pb. 1, 12.

**ಬಱ baṟa.** = ಬಱಹು. (bareness); dryness, barrenness; dearth, famine, drought (My.; T. ವಱಡ್ಚಿ, ವಱುಮೈ, ವಱ್ಚಿ, ವೆಱುಪ್ಪು; M. ವಱ, ವಱವು, ವಱುದಿ, ವಱುಮ; Te. ವರವು, ವರುವು). [ಅಱಿಯೇಱು ಮಾರಿ ಪಸವಿಲ್ಲ ಬಱಿಂ ಪೆಱವುಂ ಭಯಂಗಳಾಕುಲಿತೆಗಳಿಲ್ಲ Ap. 1, 52; ಬಱದ ನಾಡಿನ್ದ ಬನ್ದ ಬಣಗುಗಳನ್ತೆ Cv. 749]; scarcity; emptiness, hollowness; ruin. 2, dry fire-wood (ಶುಷ್ಕಕಾಷ್ಠ Nn. 85; T. ವೆಱು). ತುಱುಸಿಕೊಣ್ಡರೆ ಬಱ ಬಿಟ್ಟೀತೇ? (Prv.). ನೀರ ಬಱ, ಮಱೆಯ ಬಱ (My.). see Prvs. s. ದಣ್ಡು, ಬಱೀ ಮಾತು, ಬಾಯಿ. — ಬಱಗರುಗ. Garuga that grows in dry places (My.). — ಬಱಗಾಲ. -ಕಾಲ. a time of famine (My.; ದುರ್ಭಿಕ್ಷ G.; B. 4, 76; 5, 103). ಅಧಿಕಮಾಸ ಬಱಗಾಲದಲ್ಲಿ ಬನ್ದ ಹಾಗೆ. — ಬನವಾಸಿಗೆ ಹೋದರೂ ಬಱಗಾಲ ತಪ್ಪಲಿಲ್ಲ. — ಬರುವವರ ಸಂಗಡ ಬನ್ದರೂ ಬಱಗಾಲ ತಪ್ಪಲಿಲ್ಲ (Prvs.). — ಬಱಗೆಡು. to be ruined by want of food or fasting. ಬಱಗೆಟ್ಟ ಬಡ ಹುಡುಗರು (B. 4, 77). see Prv. s. ಪರ 2. — ಬಱನಾಗು. -ಆಗು. to be ruined or lost (Śśv. 4, 89). — ಬಱ ಬರು. a famine to happen. ಬಱ ಬನ್ದ ಕಾಲಕ್ಕೆ ಮಗ ಉಮ್ಬೋಕೆ ಕಲತ (or ಕಲಿತ). — ಬಱ ಅನ್ದರೆ ಬಿದರಕ್ಕಿ. — ಬಱ ಬನ್ದರೆ ಊರ ಬಿಡಬಾರದು, ದಣ್ಡು ಬನ್ದರೆ ಊರಲ್ಲಿರಬಾರದು (Prvs.). — ಬಱ ಬೀೞು. = ಬಱ ಬರು. (My.; B. 4, 74; 5, 102. 205). — ಬಱವಱ. -ಬಱ. rep. great or complete dryness; so as to become completely dry. ಬಱವಱ ಬತ್ತೆ (Abh. P. 9, 30). — ಬಱವಱಾಗು. -ಆಗು. to become completely dry (Cpr. 8, 6). — ಬಱವೇಱು. -ಏಱು. = ಬಱ ಬರು. (My.). — ಬಱಸಿಡಿಲ್. -ಲು. a dry, or an empty, thunder-bolt, *i. e.* either one unaccompanied by rain, or one not causing combustion [ಬಱ ಸಿಡಿಲೆಱಪನ್ತೆಱಪ ಸರಲ ಬರಪಂ ಕಣ್ಡು Pb. 12, 200; Vr. 36, 24]; (Cpr. 9, 13; Bp. 45, 10; 50, 60; J. 4, 10; 8, 32; Rśv. 8, 105).

**ಬಱಟಿ baṟaṭi.** = (ಬಟ್ಟು 1), ಬೆಱಟಿ, ಬೆಱಣಿ. dried cow-dung, used as fuel (T. ವರಾಟ್ಟಿ, ವಱಾಟ್ಟಿ, ವರಳಿ; Tu. ಬಱಂಟ್; M. ವರಳಿ, ವರಡಿ, ವರಳಿ, ವಱಳಿ; Te. ವರಣ್ಟೆ, ವರಟ; *cf.* ಬಱ No. 2). ತರ್ಪುಗಳ್ ಅಱುಗುಂ ಬಱಟಿಯೊಳ್ ಉರ್ದಿ, ನೆಲಾವರೆಯ ಬೇರನ್ ಅಮಲಕಮುಮಂ ಬರ್ದಿಲಿಮಿಂಚಿಯ ರಸದೊಳ್ ನಿರ್ದಯೆಯಿನ್ದೊರಸಿ, ಪೂಸೆ ದಿನಪಂಚಕದೊಳ್ (Śmd. 345 Mdb., o. r. ಬೆಱಟಿ).

**ಬಱಡು baṟaḍu.** = ಬಡ್ಡು, ಬರಡು. bareness, emptiness; vainness, unprofitableness; barrenness, sterility; dullness (My.; T., M. ವರಡು, dryness, meagerness, sterility; Te. ವಟ್ಟಿ). [ನೀನೊಲಿದರೆ ಕೊಱಡು ಕೊನರುವುದಯ್ಯಾ ನೀನೊಲಿದರೆ ಬಱಡು ಹಯನಹುದಯ್ಯಾ Bv. 66]. — ಬಱಡ. -ಅ 3. a man who has no children (My.; T. ವಱಡ). 2, a vain or useless man; a man destitute of good qualities, a niggard; a dull, foolish man (Rām. 6, 2, 25; My.). ತ್ಯಾಗಿಯಂ ಬಱಡಂ... ಜಱಯಲ್ (Śś. 103). see ಮನ-; Sp. s. ಬಟ್ಟ. — ಬಱಡಾಕಳು. -ಆಕಳು. a barren cow (My.; T. ವಱಟ್ಟು ಮಾವು; Te. ವಟ್ಟ ಆವು). — ಬಱಡಿ. a barren woman (My.; T., M. ವಱಡಿ). — ಬಱಡುಕೆಲಸ. useless work (My.). — ಬಱಡುಪಶು. = ಬಱಡಾಕಳು. (Bp. 9, 26). — ಬಱಡುಮನ. an empty, hollow mind (Rām. 2, 3, 13; My.). — ಬಱಡುಮಾತು. a vain or useless word (My.). — ಬಱಡೆಮ್ಮೆ. -ಎಮ್ಮೆ. a barren buffalo (My.). ಆದಷ್ಟು ಆಯಿತು, ಬಱಡೆಮ್ಮೇ ಹಾಲು. — ಬಱಡೆಮ್ಮೆಗೆ ಕರಡುಹುಲ್ಲು (Prvs.).

**ಬಱತು baṟatu.** P. p. of ಬಱೆ 1.

**ಬಱಪ baṟapa.** dryness; emptiness: want of satisfaction (Cpr. 8, 71).

**ಬಱಲು baṟalu.** bareness. — ಬಱಲಾಗು. -ಆಗು. to become bare, as trees (My.). — ಬಱಲು ಮಾಡು. to make bare, as trees (C.).

**ಬಱಹು baṟahu.** = ಬಱ. dearth, etc. ಮಱೆಯ ಬಱಹಿನಲ್ಲಿ ಅವಗ್ರಾಹ ಅವಗ್ರಹ ಎನಿಸುಗು (Nr.).

**ಬಱಿ baṟi.** = ಬಱು, ಬಱೆ 2. bareness; nakedness; emptiness; (dryness); mereness: the state of being only this and nothing else, simpleness, soleness; vainness, worthlessness, unprofitableness, uselessness (My.; Tu. ಬಜಿ; T. ವಱು, ವೆಱು, ವೆಱ್ಱು; M. ವಱು, ವೆಱು; Te. ಉತ್ತ, ವಟ್ಟಿ, ವೆಡೆ). — ಬಱುಕಷ್ಟ. nothing but trouble (My.). — ಬಱು ಕೆಯ್. to make bare, empty or void, to annihilate, to ruin (Rśv. 5, 129; J. 4, 37; 12, 20; 23, 13). — ಬಱು ಕೆಯಿ. — ಬಱು ಕೆಯ್. see s. ಬಕ್ಕಟಬಯಲ್. — ಬಱುಕೊಬ್ಬು. nothing but fat (My.). — ಬಱು ಗಣ್ಟು. an empty bundle (My.). — ಬಱುಗಾಲು. -ಕಾಲು. a naked foot (My.; B. 5, 159). — ಬಱುಗೆಯ್. -ಕೆಯ್. 1. an empty hand (Sś. 26; My.). — ಬಱು ಗೆಯ್. 2. = ಬಱು ಕೆಯ್. (Bp. 31, 14; Bh. 2, 4, 10; Rām. 6, 30, 7; J. 27, 38). — ಬಱುತಾಱುಗ. a mere dry, sapless mass (Ch. v. 19). — ಬಱುದು. that which is empty, void, barren, vain, idle, etc. (ಸೋಡಂ ಬಾಡಂ Śmd. 110; Ct. II, 22; ಸೋಡಂ ಬಾಡಂ, ಉಣ್ಣ ವಳಿಯದು Kk. 89; My.; T. ವಱುದು). ಬಱು ವಹುಪು (ಶೂನ್ಯ, ವಶಿಕ, ತುಚ್ಛ, ರಿಕ್ತಕ Nr.). — ಬಱುದಾಗು. to become empty (Cpr. 6, 82; Śsv. 4, 60; My.); to be ruined or gone, as a house or property (My.); to be nothing but—. ಬಱುದಾದ ಕ್ರೀಡಂ (ಜಱೆ Ct. I, 29). — ಬಱುದು ಮಾಡು. to empty, as a box [ಕುಡಿವೆನೊ ಲವಣಾಬ್ಧಿಯಸೀಗಡೆ ತೋಳೊಳ್ ತುಳ್ಕಿ ಬಱುದು ಮಾಟ್ಪೆನೊ Ap. 12, 86]; (My.); to make void, to ruin, as a house (My.). — ಬಱುದೆ. -ಎ 3. ಬಱುದೇ. -ಏ 2. that which is empty indeed, etc. 2, voidly, vainly, causelessly, for nothing, idly (ಸುಮ್ಮನೆ, ಅಲ್ಲವರ್, ಅಕಾರಣ Śmd. 397. 110; ಸುಮ್ಮನೆ 224 Cm.; My.). ಬಱುದೆ ತಿನುತಿರ್ಪವಂ (242). ಬಱುದೆ ಹೊತ್ತು ಕಳೆಯದಿರು! (Dp. 34). ಪುಗ ಟೆಗೆ ಸಿಕ್ಕಿದ್ದು ಬಱುದೆ ಹೋಯಿತು (Prv.). see Cpr. 2, 54; 5, 128; 6, 22. 55; Bh. 1, 8, 57; 1, 10, 26; Bp. 14, 22; 58, 34; Śsv. 4, 36; J. 1, 6; 4, 22. 49. — ಬಱುದೇರ್. -ತೇರ್. an empty chariot (J. 27, 45). — ಬಱುದೊಗಲ್. -ತೊಗಲ್. nothing but a skin (J. 16, 20).— ಬಱು ದೊಱೆ. -ತೊಱೆ. a dry river or stream (Bh. 4, 3, 12). — ಬಱು ನುಡಿ. an idle word (Bp. 29, 28). — ಬಱುನೆನಹು. mere thought or fancy (ಸ್ವಪ್ನ Mr. 317, o. r. ಬಱು-). — ಬಱುಬಾಯಿ. an empty mouth (My.). [ಹಾವು ಕಚ್ಚಿದ ಬಾಯಿ ಬಱುಬಾಯಿ]. 2, a person who only speaks, but does not act (My.). — ಬಱುಬೇಟ. mere, or vain, erotic play (J. 15, 5). — ಬಱುಬೊಬ್ಬಾಟ. idle bellowing or outcrying (Bh. 2, 13, 47). — ಬಱುಮಾತು. = ಬಱುಮಾತು. an idle word; senseless talk (ಪ್ರಲಾಪ Hlā.); nothing but words, mere words (Bp. 45, 40). — ಬಱುಮಾಯೆ. nothing but fraud or tricks (J. 4, 15).— ಬಱುಮೆಯ್. a naked body (My.). ಹುಡುಗರು ಬಱು ಮೆಯ್ಲಿ ಇರುತ್ತವೆ (B. 5, 145). — ಬಱುಯ. = ಬಱುದೆ. ಅನ್ನಸಂಗ್ರಹ ಮಾಡದೆ ಬಱುಯ್ಯ ತಿನ್ನೋಣ ಕುಡಿಯೋಣ (B. 5, 86). — ಬಱುಯಂ. (fr. ಬಱುದು Śmd. 184). a vain man. — ಬಱುಯ ಕನ್ನಡ. nothing but Kannaḍa: pure Kannaḍa. ಸಂಸ್ಕೃತಂ ಬೆರೆಯದ ಬಱುಯ ಕನ್ನಡಂ (ಅಚ್ಚಗನ್ನಡಂ Śmd. 45 Cm.). — ಬಱುಯ ಕನ್ನಡಬಾಸೆ. = ಬಱುಯ ಕನ್ನಡ. (Bp. 1, 21). — ಬಱುಯ ಕರ್ಮ. mere sin, nothing but sin (Bp. 60, 24). — ಬಱುಯ ಕಕ್ಕು. mere trickery (Bp. 56, 17). — ಬಱು ಯದು. = ಬಱುದು. ಉರಿ ಬನ್ದು ಬೇಲಿಯನು ಹಱುದು ಹೊಕ್ಕುದ ಕಣ್ಡೆ; ಬಱುಯದು, ಬೇಗೆಯಬಱುಯದುದು (sun-rays, Sp.). — ಬಱುಯ ಬೇಟ. = ಬಱುಬೇಟ. (Bp. 42, 7). — ಬಱುಯ ಮಣ್. nothing but earth (Bp. 60, 49). — ಬಱುಯ ವೈಸಿಕ. mere trickery (Bp. 40, 51). — ಬಱುಯ ಹುಸಿ. a mere lie (Bp. 46, 60). — ಬಱುಯ ಸಜ್ಜೆ. an empty linga-box (Bp. 38, 15). — ಬಱುಯ ಹೇಯ. mere sorrow (Bp. 40, 78). — ಬಱುಯಾಟ. -ಆಟ. useless play (Bp. 15, 24). — ಬಱುವಾತು. = ಬಱುಮಾತು. — ಬಱುವಾತುಗಾಱ. an idle talker (Rśv. 11, 92). — ಬಱುಸಜ್ಜೆ. = ಬಱುಯ ಸಜ್ಜೆ. (Bp. 38 sum.).— ಬಱು ಸುಳ್ಳ. a bare-faced liar. see Prv. s. ಸರಸ. — ಬಱುಹೆಡಗೆ. an empty basket (Bh. 1, 10, 30). — ಬಱುಹೊಟ್ಟೆ. an empty stomach (My.). — ಬಱೀ ಕೆಯ್. = ಬಱುಗೆಯ್ 1. (My.). — ಬಱೀ ಗುಲ್ಲು. a useless noise. ಬಱೀ ಗುಲ್ಲು ನಿದ್ರೆಗೇಡು (Prv.). — ಬಱೀಗೆಯ್. = ಬಱೀ ಕೆಯ್. (My.). ಬಱೀಗೆಯ್ಲಿ (with the hand without any cloth) ಮೊಱ ಹಾಕಿದ ಹಾಗೆ (Prv.). — ಬಱೀದು. = ಬಱುದು. (My.; Si. 369). — ಬಱೀ ಮಾತು. = ಬಱುಮಾತು. ಬಱೀ ಮಾತಿಗೆ ಮರುಳಾದರೆ ಬಱ ತಪ್ಪೀತೇ?— ಬಱೀ ಮಾತಿನವನಿಗೆ ನರೆಯಿದ್ದರೇನು? — ಬಱೀ ಮಾತಿನವ ಹೊಱೆ ಹೊತ್ತಾನೇ? (Prvs.). — ಬಱೀ ಹೇಲು. mere faeces. ನರೀ ಕೊನ್ದರೆ ಬಱೀ ಹೇಲು (Prv.).

**ಬಱು baṟu.** = ಬಱಿ, etc. bareness, etc. [ಜಂಗಮ ಪಾದೋದಕ ಪ್ರಸಾದವಿಲ್ಲದವರನೊಲ್ಲೆನೊಲ್ಲೆ; ಅವರು ಬಱುಕಾಯಿಗಳೆಮ್ಬ Cv. 284]. — ಬಱುಗೆಣ್ಡ. -ಕೆಣ್ಡ. an uncovered live-coal. ಬಱುಗೆಣ್ಡದೊಳು ಸುಟ್ಟ ಅಡಗು (ಭೂತಿ Mr. 217). — ಬಱುಗೆಯ್. -ಕೆಯ್. an empty hand (Cpr. 2, 43). — ಬಱುಗೋಣಿ. mere sack-cloth (ಕನ್ಥಿಕೆ Mr. 350). — ಬಱುಚೆನ್ನ. (Śmd. 78 Mdb.). a handsome man and nothing besides. [— ಬಱುದೊಱೆವೋಗು. -ತೊಱೆ. -ಪೋಗು. to become useless like a river gone dry. ಶರಣು ಶರಣೆನಲಱು ಯದೆ ಬಱುದೊಱೆವೋದಿರಲ್ಲ Cv. 75, 197]. — ಬಱುನೆನಹು. = ಬಱು ನೆನಹು, q. v. [— ಬಱುಬಂ. = ಬಱುವ. ಪೊಡ್ಡೊಡೆ ಬಱುಬಂ ಪೊಯಿ ಲ್ವೆತ್ತನ್ತೀಸುಮನಱುಯದೆ ಪರಿಭವಾನಿಲಂ ಶೋಕಾನಲನಿರ್ಮುಡಿಸೆ Pb. 8, 70 va.]. — ಬಱುಮಾತು. = ಬಱುಮಾತು. (ಪ್ರಲಾಪ Mr. 88). see s. ಮಾತುಗುಟ್ಟು. — ಬಱುಮೆಯ್. a naked body (Cpr. 8, 64). — ಬಱುವ. (fr. ಬಱುದು Śmd. 185). a vain man. [ಬಱುವಂ ಸಾರಥಿಯಿಲ್ಲ ಮದ್ಯ್ಗ ಮಱೆಯುಂ ತಾನಿಲ್ಲ Pb. 12, 207; — ಬಱುವಾತು. -ಮಾತು. = ಬಱುಮಾತು. ಕೇಳ್ದ ಮಾತಱಯದ ಮಾತು ತಮ್ಮ ಬಱುವಾತು ಗಳೊಳ್ ಪುದಿದೆಗ್ಗರೆಯ್ದೆ ಕಣ್ಡೆಱೆವಿನಂ Pb. 4, 95].

**ಬಱೆ baṟe. 1.** to grow dry, to dry up; to grow lean; to disappear, etc. (ಇಂಗು Śm. 83; ಆಱ್ Kk. 60; Cpr. 8, 81; T. ವಱ; M. ವರಳು, ವಱಳು). P. ps. ಬಱತು (Bp. 11, 12; 12, 48; 20, 12; 21, 46; 27, 5; 35, 32; 58, 49; V. 39, 17; J. 15, 2; 16, 45), ಬಱೆತು. see Bp. 38, 1; Cpr. 10, 71; ಅಂಗುಳವಱೆ. only: ಬಱ ಬಱತು ಹೋಯಿತು.

**ಬಱೆ baṟe. 2.** = ಬಱು, etc. bareness, etc. 2, dry soil (My.). — ಬಱೆ ಕೂಟ. a useless, unprofitable intercourse. ಬಱೆಕೂಟ ತನ್ನನ್ನೆ ಇಱುದು ಕೊಣ್ಡನ್ತೆ (Sp.). — ಬಱೆಗುಡುಹು. -ಕುಡುಹು. a mere drum-stick (Bp. 20, 12). — ಬಱೆಪೆಟ್ಟಿಗೆ. an empty box (My.). — ಬಱೆಮಾತು. = ಬಱುಮಾತು. (My.; ಪ್ರಲಾಪ G.). — ಬಱೆಯೊಡಲು. -ಒಡಲು. a mere, or vain, body. ಜ್ಞಾನ ವುಳ್ಳವರೊಡಲು ಭಾನುಮಣ್ಡಲದನ್ತೆ; ಜ್ಞಾನವಿಲ್ಲದರ ಬಱೆಯೊಡಲು ಅಗ ಸರ ಬಾನೆಯನ್ತಕ್ಕು (Sp.). — ಬಱೆಹಾಲು. nothing but milk (My.).

— ಬಱೇ ನೂಲು. nothing but cotton-thread (B. 3, 102). — ಬಱೇ ಬಯಲು. a bare plain (G. 366). — ಬಱೇ ಸೆಱೆ. a mere prison (B. 5, 268).

**ಬಱ್ಱನೆ barrane.** with a whir or flur or sudden and noisy vibration of wings. (Mhr. ಭರಾಕಾ, ಭರಾರ). ಹಕ್ಕಿ ಬಱ್ಱನೆ ಹಾಱುತ್ತದೆ (My.). ಆ ಹದ್ದು ಬಱ್ಱನೆ ಎಱಗಿ (B. 2, 25). 2, with a rush or dash, smartly, swiftly (B. 2, 12; 5, 138; My.).

**ಬರ್ಕಟೆ barkata.** = ಬಕ್ಕಟೆ. bareness, etc. — ಬರ್ಕಟೆ ಬಯಲ್. = ಬಕ್ಕಬಯಲ್. (Grj. 5, 5).

**ಬರ್ಕರಕರ್ಕರ barkara-karkara.** pleasure and grief (? Cpr. 10, 55 va.; the word appears in Sk. as ವರ್ಕರಕರ್ಕರ, where it has tentatively been translated by "of all kinds or sorts").

**ಬರ್ಗು bargu.** = ಬಗ್ಗು 1. the crying, cooing, etc. (T. ವಱಂಗು, to speak).

**ಬರ್ಚಣೆ barcane.** paint, colour (Te. ಬಚ್ಚೆನ). (ಸಿನ್ದೂರಂಗಳ) ಬಿದುವೊಳ್ ಬರೆದು ಬರ್ಚಿಸಿದ ಬರ್ಚಣೆಯು, ಪಜೆವಾಸಱೆಯೊಳ್ ಅಮರ್ಚಿ ರಚಿಸಿದ ತನಾಲರೇಖೆಯು... ವಿಲಾಸಮುಳವಡೆ (Rśv. 6, 11 va.).

**ಬರ್ಚಿ barci.** = ಬರ್ಚಿ. a sort of spear (B. 5, 48; Mhr., H. ಬರಚೀ). — ಬರ್ಚಿಕಟ್ಟಿಗೆ. (ಶಲ್ಯ G.). ಬರ್ಚಿಕಟ್ಟಿಗೆಯಿನ್ದ ಯುದ್ಧ ಮಾಡುವವ (ಕೌನ್ತಿಕ G.). ಬರ್ಚಿಕಟ್ಟಿಗೆಯುಳ್ಳವ (ಶಾಕ್ತೀಕ G.). — ಬರ್ಚಿಕೋಲು. (ಈಟಿ Cb.).

**ಬರ್ಚಿಸು barcisu.** to paint, to colour [ಬಪ್ಪುವ ಕೆಮ್ಪು ತುಮ್ಬಿಯೊಳ್ ಮಿಸುಗುವ ಕಪ್ಪುರ ಬರ್ಚಿಸಿದವೊಲ್ ಬಗೆಗೊಳ್ಳಿನೆಗಂ Ap. 2, 66]; (Cpr. 6, 64 va.; 6, 67; see Rśv. s. ಬರ್ಚಣೆ).

**ಬರ್ಜಿ barji.** = ಬರ್ಚಿ. (My.).

**ಬರ್ತನ bartana.** the act of coming. see ಎನ್ನವರ್ತನ.

***ಬರ್ದ barda.** a great person, virtuous person. (*cf.* ಬರ್ದು 3). ನಾಣ್ಗೆಟ್ಟು ಬನ್ದೆನ್ನ ಸಿನ್ತರೆದಂ ಬರ್ದರೊಳಾನೆ ಬರ್ದನೆನುತುಂ ನೇರ್ವರಿಲ್ಲಿ Pb. 9, 63.

**ಬರ್ದು bardu. 1.** to die (ಮರಣ Śmd. Dh.; *cf.* ಪಡು 3; T. ವಡ್ಡು, to be destroyed; ಪೞು, to grow less; to die; Te. ಬಿದ್ದು, to die. Cpr. 10, 113).

**ಬರ್ದು bardu. 2.** = ಬರ್ದುಗೆ. death (ಸಾವು Śm. 44; *cf.* ಬಿೞ್?). — ಬರ್ದಿಲ. -ಇಲ (see s. ಇಲ್ 1). a male who is free from death: a deity (ಸಗ್ಗಿಗ, ಸುರ Śm. 9). 2, a place at which there is no death: heaven (ಸಗ್ಗ Śmd. 55; ಸಿಲಿಮ್ಪನಿಲಯ Ct. II, 62; ಸ್ವರ್ಗ Kk. 10b; ಬಚ್ಚರೆ, ಸಗ್ಗ, ಅಮರಲೋಕ 10a, o. rs. ಬರ್ದಿಲ್, ಬರ್ದಿಲ). — ಬರ್ದಿಲಾಳ್ಕೆ. -ಅಳ್ಕೆ. India (ಸಗ್ಗಿಗರೆಡೆಯ, ಸುರಪತಿ Śm. 9).

**ಬರ್ದು bardu. 3.** (fr. ಬಲ್). = ಬದ್ದು. increase; greatness; perfection; proficiency, skill (V. 11, 13). ಬರ್ದನ್ದು ಪ್ರೌಢಿ (Śmd. II). [— ಬರ್ದಬಾೞ್. great life. ಉಪರಿಚರ ಮಹಾರಾಜಸಿನ್ಧಗ್ಗಳಂ ಪೆಱರಾರುಮಿಲ್ಲಮಾ ಸಂಸಾರದೊಳ್ ಬರ್ದಬಾೞನೀತನೆ ಬರ್ದನೆನ್ದು ಪೊಗೞ್ದೊಡೆ Vr. 137, 21; Ap. 2, 65 va.]. 2, = ಬರ್ದುಗ. ಬರ್ದನೆ ಕರಂ ಪ್ರೌಢನಕ್ಕುಂ (Kk. 87). — ಬರ್ದಿಲಿಮಿಂಟ. -ಇಲಿಮಿಂಟ. a well-matured lemon. see Śmd. s. ಬಱಟ. [— ಬರ್ದುಗೆಡು. -ಕೆಡು. to lose one's prestige, honour. ಮನದಳಿಪಿಂ ತಮಾಳಲತಿಕಾಂಗಿಯರಾಟಿಸೆ ಬರ್ದುಗೆಟ್ಟು ಕಾಂಚನಲತಿಕಾಂಗಿಯರ್ ಬಯಸೆ Ap. 2, 46]. *cf.* ಎಳವರ್ದು.

***ಬರ್ದು bardu. 4.** to live. ಅನೇನಾಚನ್ದ್ರಾರ್ಕತಾರಮ್ಬರಂ ಬರ್ದಪ್ಪನೆ ಎಣೆಕೊಣ್ಡು ಕಸವರಂ ತವನಿಧಿಯನ್ತೆ ತವದಿರ್ದಪ್ಪುದೆ Vr. 17, 3; Ap. 3, 65.

**ಬರ್ದುಕು barduku. 1.** = ಬದುಕು 1, etc. to live, etc. (ಜೀವನಾರ್ಥ Śmd. Dh.; ಬಾೞ್ Śm. 115; Cpr. 8, 91). [ಈ ಪೊಕುಟಿಪೊನ್ನಾಪರೆವೊಕ್ಕು ಮೇಣವಂ ಬರ್ದುಕುವನೇ Pb. 11, 121].

**ಬರ್ದುಕು barduku. 2.** = ಬದುಕು 2, etc. living, etc. [ತಮಗಂ ಬರ್ದುಕಿಲ್ಲ ಧರ್ಮಮಂ ಗಱಾಯಿಸಿಕೊಳ್ವುದೊನ್ದೆ ಚದುರ್ Pb. 2, 27]. ವಸನ್ತರಾಜನ್ ಎಟ್ಟನ್ದಪನ್, ಇನ್ದು ನಾಳೆ ಬರ್ದುಕಿಲ್ಲ ವಿಯೋಗಿಗೆ (Śmd. 260 Mdb. and another MS.).

**ಬರ್ದುಗ barduga.** a man of acquirements, a proficient man (ಬಿತ್ತಿಗ, ಪ್ರೌಢ Kk.; ಬಿತ್ತಿಗ, ಬಿನ್ನಣಿ, ವರಪ್ರೌಢ Śm. 47).

**ಬರ್ದುಗೆ barduge.** = ಬರ್ದು 2. death (ಸಾವು Śmd. II; Kk. 93).

**ಬರ್ದುಂಕು bardunku.** = ಬರ್ದುಕು 1 [ಕರ್ಮಕ್ಕೋಡಿ ಬರ್ದುಂಕಲ್ಕುಮಱಿದರಾರ್ ಭೂತಕಳೊಳ್ Kr. 1, 72; Pb. 1, 68 va.]; (Śmd. Dh.; Abh. P. 10, 218; 14, 24; Grj. 10, 19), etc. ಬರ್ದುಂಕುವಂ (ಬಾಳ್ವಂ Śmd. 237 Cm.).

***ಬರ್ದೆ barde.** an accomplished middle aged woman. ಅಂಕದ ಬರ್ದೆಯರುಮನುಗಿಬಗಿ ಮಾಡಿದ ಸನ್ತೋಷದೊಳ್ ಬಳ್ವಳ ಬಳೆದ ವಿಕ್ರಾನ್ತತುಂಗನ ನಿಡುದೋಳ್ಗಳ್ Pb. 2, 39 va.

**ಬರ್ಫ barpha.** = ಬರ್ಫ. snow; hoar-frost; ice (ತುಷಾರ, ಪ್ರಾಲೇಯ, ಮಹಿಕೆ G.; Mhr., H. ಬರಫ).

**ಬರ್ಫೆ barphe.** = ಬರ್ಫ. see ಪೇಡೆ-.

**ಬರ್ಬರ barbara.** = ಬಬ್ಬರ (Śmd. 345), etc., ವರ್ವರ. N. of a district or country (Bp. 6, 18; 61, 30). 2, *a man of low origin, a low fellow, not an Ārya, a barbarian* (ಪಾಮರ, ಪ್ರಾಕೃತ, ಇತರ, ತಾನೊಲ್ಲದಂ Mr. 229). 3, a kind of sandalwood, yellow and said to smell like a ripe mango (Sk.; ಹರಿಚನ್ದನ Mr. 335). 4, *a kind of shrub, Clerodendrum syphonanthus R. Br.* 5, = ಬರ್ಬರೆ Nr. 1, ವರ್ವರೆ (ನಾಱುವ ಬೇಳೆ Śmd. 345). 6, the thorny Babool tree, Acacia arabica (ಬೊಬ್ಬುಲಿ Śmd. 345).

**ಬರ್ಬರೆ barbare.** = ವರ್ವರೆ. *a kind of Ocymum or basil* (see ಬರ್ಬರ No. 5 and ನಾಱುವ ಬೇಳೆ). 2, a strongly smelling annual herb, Cleome pentaphylla L. (see ನಾಱುವೇಳೆ).

**ಬರ್ಬುಲ barbula.** = ಬರ್ಬೂರ, etc. (ಬೊಬ್ಬುಲಿ Śmd. 364, o. r. ಬಬ್ಬುಲಿ).

**ಬರ್ಬೂರ barbūra.** = ಬಬ್ಬುಳಿ q. v., ಬರ್ಬುಲ, ಬರ್ಬೂಲ, ಬೊಬ್ಬುಲಿ, etc. the thorny Babool tree, Acacia arabica Willd. (ಬೊಬ್ಬುಲಿ Śmd. 359, o. rs. ಬರ್ಭೂಲ, ಬಬ್ಬುಲಿ).

**ಬರ್ಬೂಲ barbūla.** = ಬರ್ಬೂರ, q. v.

**ಬರ್ಮ barma.** Tbh. of ಬ್ರಹ್ಮ (Śmd. 353; Śm. 8). 2, Burma (My.).

**ಬರ್ಲು barlu.** = ಬರಲು. (My.).

**ಬರ್ಸನ barsana.** see ಗೋದಿ- (and *cf.* ಬರಸ).

**ಬರ್ಹ barha.** coming. ಎದ್ದು ಇದಿರ್ಚಿ ಬರ್ಹನಂ (ಅಭ್ಯುತ್ಥಾನ Mr. 462).

**ಬರ್ಹ barha.** = ವರ್ಹ. the tail of a bird; *a peacock's tail.* 2, *a leaf.* 3, a retinue, train.

**ಬರ್ಹಿ barhi. 1.** *a peacock.*

**ಬರ್ಹಿ barhi. 2.** Tbh. of ಬರ್ಹಿಸ್. Kuśa grass, etc.

ಬರ್ಹಿಃಶುಷ್ಮ barhis-śuṣma. fire, Agni (My. Amara).
ಬರ್ಹಿಣ barhiṇa. = ಪರ್ಹಿಣ. *a peacock.*
ಬರ್ಹಿಣವಾಹನ barhiṇa-vāhana. *Skanda, Kārtikēya.*
ಬರ್ಹಿಧ್ವಜ barhi-dhvaja. N. of a king (J. 25, 15).
ಬರ್ಹಿಪುಷ್ಪ barhi-puṣpa. *a kind of perfume.*
ಬರ್ಹಿಜ್ಯೋತಿಸ್ barhis-jyōtis. *fire, Agni.*
ಬರ್ಹಿಮುಖ barhis-mukha. *a deity, a god.*
ಬರ್ಹಿಷದ್ barhiẓ-sad. seated on kuśa grass: a pitṛi or deified progenitor. (R.).
ಬರ್ಹಿಷ್ಕೇಶ barhis-kēśa. fire, Agni. (My.).
ಬರ್ಹಿಷ್ಠ barhiṣṭha. = ಪರ್ಹಿಷ್ಠ. (fr. ಬೃಹತ್). largest, strongest. 2, a species of fragrant grass, Andropogon muricatus. 3, the resin of Pinus longifolia. (My.).
ಬರ್ಹಿಸ್ barhis. = ಬರ್ಹಿ 2. *kuśa grass, sacrificial grass.* 2, a bed or layer of kuśa grass. 3, *sacrifice.* 4, *fire.*

ಬಲ್ bal. 1. (= ಬಲಿ 1). to grow strong or firm, to be full-grown, etc. P. p. ಬಲ್ತು (Śmd. 287 Cm.). ಬಲ್ತ ಮರ (Si. 120; My.). ಬಲ್ತ ಕಾಯಿ, ಬಲ್ತ ಕೊಬ್ಬರಿ (My.). [— ಬಲ್ದಿರ್. -ಇರ್. to be strong, firm. ಆದಿಬ್ರಹ್ಮರ ಕೊಟ್ಟ ಮೇದಿನಿಗಾನೊಡೆಯನಾತನರಸಿನಿವಿಱುದಿನ್ನಾದೊಡಮೇನೆನಗೆಪ್ಪು ಮದೋದಯದೊಳ್ ಬಾಹುಬಲಿ ಬಲ್ದಿರ್ದಂ Ap. 14, 8].

ಬಲ್ bal. 2. (fr. ಬಲ್ಲಿತು or ಬಲ್ಲಿತ್ತು Śmd. 212. 213). = ಬಲು, ಬೊಲು. strength, firmness, bigness, greatness, abundance, excess, etc. (T., M. ವಲ್, ಪಲು; Te. ಬಲು). [— ಬಲ್ಕಣೆ. great obstacle. ಕಣೆಯಂ ಶೌರ್ಯಾಭಿಮಾನಕ್ಕೆಡಱದ ರಿಪುಸೈನ್ಯಕ್ಕೆ ಸಂಗ್ರಾಮದೊಳ್ ಬಲ್ಕಣೆಯಂ Pb. 7, 95]. — ಬಲ್ಗಣೆ. -ಕಣೆ. a strong arrow (Abh. P. 13, 79. 80). — ಬಲ್ಗಣ್ಡಿಕೆ. (Śmd. 248). great prowess (Rśv. 5, 99). — ಬಲ್ಗಣ್ಡು. = ಬಲ್ಗಣ್ಡಿಕೆ. (Abh. P. 9, 156). — ಬಲ್ಗಣ್ಣೆ. -ಕಣ್ಣೆ. a strong rope (J. 18, 60). — ಬಲ್ಗತ್ತಲೆ. -ಕತ್ತಲೆ. = ಬಲುಗತ್ತಲೆ. thick or dense darkness (J. 2, 16; 5, 15). — ಬಲ್ಗತ್ತಿ. -ಕತ್ತಿ. = ಬಲುಗತ್ತಿ. a large knife (J. 4, 19). — ಬಲ್ಗದ. -ಕದ. a strong or large door (C. Bp. 10, 10). — ಬಲ್ಗಮ್ಬ. -ಕಮ್ಬ. a strong post (Cpr. 8, 44 va.; Rśv. 6, 11 va.). — ಬಲ್ಗರ. a powerful demon (Abh. P. 5, 78 va.). — ಬಲ್ಗರಡಿ. -ಕರಡಿ. a huge bear (Rśv. 5, 79). — ಬಲ್ಗರುಳ್. -ಕರುಳ್. large entrails (Abh. P. 13, 81). — ಬಲ್ಗಱಿ. large feathers (of an arrow, Śśv. 4, 42). — ಬಲ್ಕಿಚ್ಚು. -ಕಿಚ್ಚು. a large fire (J. 13, 59). — ಬಲ್ಗುಡಿ. a large temple (V. 37, 26). — ಬಲ್ಗುರುಜು. -ಕುರುಜು. a large ಕುರುಜು (C. Bp. 5, 2). — ಬಲ್ಗೆಚ್ಚು. -ಕೆಚ್ಚು. strong or hard core (Rśv. 6, 11 va). — ಬಲ್ಗೆಯ್. -ಕೆಯ್. a strong hand (J. 20, 5). — ಬಲ್ಗೆಯ್ತು. -ಕೆಯ್ತು. great dexterity (Abh. P. 13, 79), etc. — ಬಲ್ಗೆಯ್ಯ. -ಕೆಯ್ಯ. a man of a strong hand: one famous for his power or valour (ಪರಾಕ್ರಮಸುಪ್ರಥಿತಂ Ct. II, 52). — ಬಲ್ಚಾಟಿ. a large whip (ಕಂಕರಿಗೋಲ್ Ct. I, 79). — ಬಲ್ಜನ್ತೆ. a stout jante (Rśv. 10, 31 va.). [— ಬಲ್ದಡಿಗ. a great warrior bearing a mace, very strong person. ಬಲ್ದಡಿಗಂ ಬೀಸಿಯುಮೊನ್ದು ಕೋಟವರೆಗಂ ಕೊನ್ದಂ ಮದೇಭಂಗಳಂ Pb. 10, 104]. — ಬಲ್ದಲೆಯ. -ತಲೆಯ. (Śmd. 220). a man with a big head. — ಬಲ್ದಸಿ. = ಬಲುದಸಿ. a large pointed stake (Cpr. 5, 104). — ಬಲ್ದೊಱೆ. -ತೊಱೆ. a large stream (Śśv. 3, 30). [— ಬಲ್ನಿಡಿಯ. excessively long. ತಳ್ತ ಬಲ್ನಿಡಿಯ ಕಾಯ್ಗನೊನ್ದು ಕೊಮ್ಬು ಪೊತ್ತಿಱಿಗಿದುದು Ap. 5, 45]. — ಬಲ್ನೆಱಿ. thick foldings (Rśv. 7, 11; 13, 102). — ಬಲ್ನೆಱಿಗಟ್ಟು. -ಕಟ್ಟು. a tie of thick foldings (Śśv. 3, 9). — ಬಲ್ಪನ್ದಿ. a large hog (Śśv. 4, 19 va.). — ಬಲ್ಪುಗುಳ್. many blisters or sores (V. 9, 63). — ಬಲ್ಪಿಣಸು. a firm or close embrace (Cpr. 6, 83). — ಬಲ್ಪಣ್ಣ. a very valorous man (ತುಱುಲಾಳ್ Ct. I, 6; II, 70; ಉಱ್ಕಾಳ್, ಬಲ್ಲಾಳ್, etc., ಪರಾಕ್ರಮವುಳ್ಳವನು Śs.). — ಬಲ್ಪನ್ದಿ. firm confinement, imprisonment (ಸೆಱೆ Ct. I, 29). — ಬಲ್ಪಱಿ. a great drought or famine (V. 8, 36). — ಬಲ್ಪಿರುದು. a great mark of honour (C. Bp. 47, 12). — ಬಲ್ಭಾರ. = ಬಲುಭಾರ. a heavy weight or burden. ಮರನಿರ್ದೇನ್? ಅದಱನ್ದಲೆತ್ತಲಹುದೇ ಬಲ್ಭಾರಮಂ? ಸನ್ನೆ ಸಾವಿರ ಕಾಲಾಳಿನ ಸತ್ವಮಯ್! (Sś. 11). — ಬಲ್ಮನೆ. a large house (V. 4, 36). — ಬಲ್ಮರ. a large tree (Rśv. 5, 89). — ಬಲ್ಮರೆ. a large deer (Rśv. 5, 113). [— ಬಲ್ಮಿಡಿ. a hardnut. ಕಿಱುಮಿಡಿಯ ಬಲ್ಮಿಡಿಗಳೊಳಱಗಿ ತುಱುಗಿದ ಬನಮಂ ಪೊಕ್ಕು Pb. 5, 5 va.]. — ಬಲ್ಮುಗುಳ್. (Śmd. 197. 213). a thick bud [ಪರಿಯ ಪಸುರ್ಪು ಬೆಳ್ಪಡರೆ ಬಲ್ಮುಗುಳೊಳ್ Pb. 5, 33; Ap. 11, 110]; (Rśv. 9, 4). — ಬಲ್ಮುಡಿ. a large knot of hair (Śśv. 1, 74; 3, 7. 15). — ಬಲ್ಮುಸುಡು. a large snout (Śśv. 4, 9). — ಬಲ್ಮೊನೆ. an object with a strong and sharp point (Rśv. 6, 116). — ಬಲ್ಮೊಲ. a large hare (Rśv. 5, 113). — ಬಲ್ಮೊಲೆ. a stout breast (J. 6, 17; 8, 19; 11, 9; 26, 11). — ಬಲ್ಮೊಬಗು. loud thunder (J. 7, 51). — ಬಲ್ಲಡವಿ. -ಅಡವಿ. a large jungle (Abh. P. 7, 99 va.; 7, 114). [— ಬಲ್ಲಣೆ. -ಅಣೆ. big army. ಪಸರಿಸಿ ಪೊಕ್ಕು ಕೂಕಿಱಿದು ಕಾದುವ ಬಲ್ಲಣೆಗಳ್ ಪಳಂಚೆ Pb. 8, 93]. — ಬಲ್ಲಳ. another form of ಬಲ್ಲಾಳ, q. v. (Bp. 9, 41; Te. ಬಲ್ಲಡ). see ಸಿನ್ದ-. — ಬಲ್ಲಳದಟ್ಟಿ. = ಬಲ್ಲಾಳದಟ್ಟಿ. (Bp. 11, 26). — ಬಲ್ಲಾಟವಿಕ. -ಆಟವಿಕ. a great cheat (Rām. 1, 5, 32). [— ಬಲ್ಲಾಯ. -ಆಯ. great dimension. ನಿಡಿಯರ್ ಬಲ್ಲಾಯದ ಬಲ್ದಡಿಗರ್ ವನ್ದಿರ್ದರ್ Pb. 3, 12]. — ಬಲ್ಲಾಳ್. -ಆಳ್. = ಬಲ್ಪಣ್ಣ, q. v. [ಈ ಗಿರಿದುರ್ಗಮಂ ದಾಣ್ಟಿ ಬನ್ದ ಬಲ್ಲಾಳ್ ದಿವ್ಯಪ್ರಭಾವನಕ್ಕುಮಮೋಘನಕ್ಕುಂ Ap. 13, 57 va.]; (Abh. P. 7, 59; 11, 36; 13, 98). — ಬಲ್ಲಾಳ್ಗಣ್ಡ. a man prominent among very valorous men (Abh. P. 12, 73; T. ವಲ್ಲಾಳರ್ಗಣ್ಡ). — ಬಲ್ಲಾಳ. -ಆಳ. = ಬಲ್ಲಳ, ಬಳ್ಳಾಳ. N. (Bp. 25, 9, see ಸಿನ್ದ-; Te. ಬಲ್ಲಾಡ; T. ವಲ್ಲಾಳ = K. ಬಲ್ಲಾಳ್). 2, the Ballāḷa country or dynasty. — ಬಲ್ಲಾಳದಟ್ಟಿ. = ಬಲ್ಲಳದಟ್ಟಿ. a Ballāḷa waist-band or girth (ಸಜ್ಜನ, ಉಪರಕ್ಷಣ Nr.). — ಬಲ್ಲಾಳದಡ್ಡಿ. a Ballāḷa screen or tatty (Rām. 1, 13, 7; Bh. 1, 12, 11; 5, 11, 44). — ಬಲ್ಲಾಳ್ತನ. great valour [ಜವನ ಬಲ್ಲಾಳ್ತನಮುಮಂ ಸಿಂಹದ ಕಲಿತನಮುಮಂ Pb. 1, 139; Vr. 124, 22]; (ಕಾಣ್ಕೆ Ct. II, 76; Abh. P. 10, 220 va.; 15, 45). — ಬಲ್ಲೆತ್ತು. -ಎತ್ತು. a large ox or bull (ಮಹೋಕ್ಷ, ಉಕ್ಷತರ Hlā.; Bp. 56, 6). — ಬಲ್ಲೆಱೆಯ. -ಎಱೆಯ. a powerful lord. ಸಾರಲಿಂ! ಬಲ್ಲೆಱೆಯನ್ ಎನ್ನದೆ ಮಾತು! (Śmd. 277). — ಬಲ್ವಡಿ. -ಪಡಿ. a strong door (V. 39, 8). — ಬಲ್ವನ್ದಿಕಾಱ. -ಬನ್ದಿಕಾಱ. (Śmd. 286; Kk. 99). a great thief. ಬಲ್ವನ್ದಿಕಾಱನ ಪೋಲ್ ಪಿಡ್ಡೊಡೆದೊನ್ದೆ ಪೋಯ್ತು (Śmd. 386). [— ಬಲ್ವರಿಕೆ. -ಪರಿಕೆ. great inthrust. ಬಲ್ವರಿಕೆಯೊಳರಿನೃಪರ ಪಡಲ್ವಡೆ ತಳ್ತಿಱಿದು ರಣದೊಳ್ Pb. 1, 25]; [ಏರ್ವರಿಸೊರ್ವರೆ ಮಿಕ್ಕು ಪಾರ್ದು ಸಾರ್ದಿಸೆ ತುಱುಗಾಱಿರಬ್ಬನಿಸು ಬಲ್ವಲನಾದುದದೊನ್ದು ಕಾಳೆಗಂ Pb. 8, 93]. — ಬಲ್ವಲ. -ಬಲ. a great force (Abh. P. 9, 97). — ಬಲ್ವಳ. -ಬಳ. great power (Cpr. 1, 79; 5, 128); [— ಬಲ್ವಳಿ? ಜಯನ ಶರತತಿ ಕೊಳೆ ಬಲ್ವಳಿಯ ಮಱೆ ಪೊಕ್ಕಪೊಲ್ ಕಳಕುಳಮಾದರ್ ನಾಗರಾಜರಪಗತತೇಜರ್ Ap. 13, 65. — ಬಲ್ವಿಡಿ. -ಪಿಡಿ. firm hold. ಚಲಮಂ ಬಲ್ವಿಡಿವಿಡಿದಂ ತನ್ನಪ್ಪುದಕ್ಕೆ ಸಂಗರ ಧರೆಯೊಳ್ Pb. 13, 70; Ap. 2, 58]. — ಬಲ್ಬಿಸಿ. -ಬಿಸಿ. great heat (V. 9, 74). — ಬಲ್ಸೊತ್ತರ. -ಒತ್ತರ. great impetuousness or force (J. 26, 6). — ಬಲ್ಸರಿ. a heavy rain [ಅಮ್ಬಿನ ಬಲ್ಸರಿ ತಿಣ್ಣಮಾಗಿ ಕೆಯ್ಮಿಕ್ಕು ನಿರೋಧ ಸಾಧನ ಘಟಾಳಿಯನೋಡಿಸಲ್ Pb. 10, 92]; (Abh. P. 13, 76; Grj. 3, 61). — ಬಲ್ಸಿಡಿಲ್. a large thunderbolt (Śśv. 3, 61; 4, 4). — ಬಲ್ಸಿರ. large heads (Abh. P. 3, 158).

— ಬಲ್ಸೆಜ್. = ಬಲ್ಪನ್ನಿ. (Abh. P. 5, 38). — ಬಲ್ಸೂಱ್. a great pillage or ravage (ಡಬಡುಬ Śmd. I). — ಬಲ್ಸೋನೆ. a strong, continuous drizzle. ಮಾವಿನೊಳ್ ಮಸಗುತಮಿರ್ಪ ಬಲ್ಸೋನೆಯ ಸೋನೆಗೆ ಕಾಂಚನಕೇತಕೀವನಪ್ರಸರದಲಂಗಳ್ ಒಲೆಗುಡೆ (Śmd. 83 Mdb. and another MS.).

*ಬಲ್ bal. 3. to know. ಬವರದೊಳೇಂ ಬಲ್ಲಂ ಕರವೋಪಜು ಗೆಯಲ್ ಪೆಜರ್ಗೆ ಕಣ್ಣು ತನಗಜಿಯಂ Pb. 12, 3. (*cf.* ಬಲ್ಲಿ). [ಸಚ್ಚಿನ ನಾನಾಭಾವರತ್ಯುತ್ಸವದೊಳೆ ಪಡೆಯಲ್ ಬಲ್ಲ ವಿದ್ಯಾಧರ ಸ್ತ್ರೀಜನದಿನ್ನಂ ಕಣ್ಗೆವನ್ನಂ ಸುಕವಿಜನಮನೋಮಾನಸೋತ್ತಂಸ ಹಂಸಂ Ap. 1, 83].

**ಬಲ bala.** the right (not the left), the right side (ಅಪಸವ್ಯ, ದಕ್ಷಿಣ Hlā., Mr. 436; ದಕ್ಷಿಣ Śm. 108; C.; Tu.; T., M. ವಲ; Te. ವಲೆ). ಶರೀರದ ಬಲಭಾಗವು (ಅಪಸವ್ಯ, ದಕ್ಷಿಣ); ಸಾರಿಗಳನು ಎಡ ಬಲ ಸ್ಥಾನಂಗಳಿಗೆ ಅಯ್ದುಸುವುದು (ಪರಿಣಾಯ); ಬಲದ ಕೆಯ್ಯ ನೆಗಹಿ ಇಕ್ಕಲು ಪಟ್ಟನ್ತಹ ಯಜ್ಞಸೂತ್ರವು (ಉಪವೀತ); ಎಡದ ಕಾಲನುಡುಗಿ ಬಲದ ಕಾಲ ಮುನ್ದೆ ಇಕ್ಕುವುದು (ಆಲೀಢ), ಬಲದ ಕಾಲನುಡುಗಿ ಎಡದ ಕಾಲ ಮುನ್ದೆ ಇಕ್ಕುವುದು (ಪ್ರತ್ಯಾಲೀಢ Nr.). ಎಡ ಬಲ (Bh. 3, 13, 27; Rām. 1, 13, 4; C. Bp. 5, 8). ಕೆಲ ಬಲ (Bh. 2, 4, 12; J. 30, 29). ಹೊಲಿಯುವವನ ಬಲಕ್ಕಿರಬೇಡ, ಅಟುವವನ ಎಡಕ್ಕಿರಬೇಡ (Prv.). see Si. 205. 212. 288. 376; Bp. 24, 28. 42; 50, 27. 28; 55, 16. — ಬಲ ಕಡೆ. = ಬಲಗಡೆ. the right side (My.). ಮೆಯ್ಯ ಬಲಕಡೆ (ಅಪಸವ್ಯ Si. 376). — ಬಲಕಣ್ಣು. = ಬಲಗಣ್ಣು. the right eye (My.). — ಬಲ ಕೆಯ್. the right hand (My.). — ಬಲಗಟ್ಟು. -ಕಟ್ಟು. to cross one's path from left to right (C.). — ಬಲಗಡೆ. = ಬಲಕಡೆ. (My.; Si. 342). ಬಲಗಡೆಯ ಹೊಟ್ಟೆಯೊಳಗಿನ ಮಾಂಸಪಿಣ್ಡ (ಯಕೃತ್ G.). — ಬಲಗಣ್. -ಕಣ್. = ಬಲಕಣ್ಣು. (Bp. 18, 46). — ಬಲಗಣ್ಣು. = ಬಲಗಣ್. (My.; B. 4, 168). — ಬಲಗಾಲು. -ಕಾಲು. the right foot (B. 5, 161; My.). — ಬಲಗೆಯ್. -ಕೆಯ್. the right hand (Bp. 52, 41). 2, a superior caste of Holeyas (My.). ಬಲ ಗೆಯ್ಯವನು, a Holeya of that caste (according to Mr. E. Rice all holeyas are ಬಲಗೆಯ್ಯವರು and all mādigas ಎಡಗೆಯ್ಯ ವರು. *cf.* ಒಮ್ಬತ್ತು ಪಣದವರು and ಹದಿನೆಣ್ಟು ಪಣದವರು). (My.). — ಬಲಗೊಳ್. -ಕೊಳ್. to circumambulate from left to right so that the right side is towards the person or object saluted. [ಭವತ್ಪದ ಸರೋಜಮನಾಂ ಬಲಗೊಣ್ಡು ಮತ್ತಮಾಜಿಗೆ ನಡೆಯಲ್ಕೆ ಬನ್ದೆ ನೆನೆ Pb. 13, 65; Ap. 4, 1]. ನಣ್ಣಿಯಂ ಬಲಗೊಣ್ಡು ವನ್ದಿಸಿ (Bp. 2, 55). see Bp. 43, 21; 46, 55; 51, 79; 57, 50. — ಬಲಗೋಲು. -ಕೋಲು. the right, *i. e.* to the right, of the pole of a cart, as an ox (My.). — ಬಳತಾಯಿ. a step-mother (Dp. 32, 1; My.). *cf.* ಮಲ-. — ಬಲದಂ. -ಅಂ 3. (Śmd. 136). a man of the right. — ಬಲದೆಸೆ. the right direction or side (BP. 53, 36). — ಬಲದೊಡೆ. -ತೊಡೆ. the right thigh (Bp. 13, 16; 55, 17; My.). — ಬಲದೋಳ್. -ಳು. -ತೋಳ್. the right arm (Bp. 28, 46; 37, 46; My.). — ಬಲನ್ದೊಡು. -ಒ-ತೊಡು. to put to, or wear on, the right side (*i. e.* over the left shoulder and under the right arm). ಜನ್ನವಿರಮಂ ಬಲನ್ದೊಡುವುದು (ಉಪವೀತ Hlā.). — ಬಲಭಾಗ. the right part; the right side (ದಕ್ಷಿಣ Nn. 14; ಅಪಸವ್ಯ Si. 376) — ಬಲಮುರಿ. turning or winding to the right; a place at which a river turns to the right; N. of places (My.). ಕನ್ನಮ್ಬಾಡಿಯಲ್ಲಿ ಕಪ್ಪುಳೀ ಕಿತ್ತುಕೊಣ್ಡರೆ ಬಲಮುರಿಯಲ್ಲಿ ಹಲ್ಲು ಮುಜೀ ಕಚ್ಚಿಕೊಣ್ಡು (Prv.). — ಬಲಮುರಿಶಂಖ. a conch that winds to the right (My.). — ಬಲಮ್ಮುರಿ. -ಒ-ಮುರಿ. to turn or wind to the right, as a river, etc. (Bp. 32, 36). [— ಬಲವಕ್ಕ. -ಪಕ್ಕ. right side. ನೆಲಂ ಮೂರಿವಿಟ್ಟನ್ತೆ ಬಲವಕ್ಕದೊಳ್ ನಡೆಯೆ Pb. 9, 95 va.]. — ಬಲವಂಕ. -ಪಂಕ. the right side (My.). — ಬಲವರ್. -ಬರ್. to come to the right side: to move round a person or an object, or circumambulate them, with the right side turned towards them. [ಮೊಱು ಸೂಱ್ ಬಲವನ್ದು ಪೊದವಟ್ಟು Pb. 3, 58 va.]. ಆಲರ ಪೊಸಗಮ್ಪಿನ್ದೆಮಗೆ ಆಲಮ್ಪಿನಗ್ಗಲಿಸಿ ನೀನೆ ರಕ್ಷಿಪುದೆನುತಂ ಬಲವನ್ದು ಎಱಗುವ ತೆಱದಿಂ ಬಲವನ್ದು ಎಱಗಿದುದು ತುಮ್ಬಿಗಳ್ ಪಾದರಿಯೊಳ್ (Cpr. 7, 55). see Śmd. 24. 75; Cpr. 7, 56; Abh. P. 14, 105 va.; Grj. 3, 72; Rśv. 2, 38; J. 18, 62; ಎಡವಲ ವರ್. — ಬಲವಾಗು. -ಆಗು. to become to the right side: to cross one's path from left to right (My.). — ಬಲವಯ್ದಿಸು. -ಅಯ್ದಿಸು. to cause to go or turn to the right (Bp. 32, 27).

ಬಲ bala. 1. = ಭಲ. fine, well-done! etc. see ಚಾಂಗು-.

ಬಲ bala. 2. = ಬಳ, ವಲ. (one of the *tatsamas* Śmd. 384; Kk. 95; Śm. 77). *power, strength, might, vigour;* force, virtue in things or persons (ಶಕ್ತಿ Nn. 14; Mr. 503). 2, force, violence, rigour, severity; daring, rashness, etc. (ಸಾಹಸ Śm. 108). 3, help, means, influence (ಸಹಾಯ 14). 4, *massiveness, bulkiness* (ದೊಡ್ಡಿತು, ಸ್ಥೂಲ 14). 5, *forces, troops, a host, an army* (ಸೈನ್ಯ 14; ವಾಹಿನಿ Śm. 108; ದಳ, ಸೇನೆ Nn. 9; see ಪಡೆ 5 and ಮೊಗ್ಗರ). 6, body, form, figure, shape (ರೂಪು 14). 7, *semen virile* (ಇನ್ದ್ರಿಯ 14; 503). 8, *a crow* (ವಾಯಸ, ಕಾಗೆ 14; ಕಾಗೆ 503). 9, *Balarāma,* the elder brother of Kṛiṣṇa, also called Baladēva, Balabhadra, etc. (ಅಸಿತಾಮ್ಬರ, ಬಲಭದ್ರ 14; ಮುಸಲಿ 503). 10, N. of a demon (ದನುಜ, ರಾಕ್ಷಸಭೇದ 14; ರಕ್ಕಸ 503). 11, N. of an author (Nn. 3). 12, the sky (ವಿಹಾಯಸ, ಆಕಾಶ 14). 13, water (ವಾರಿ, ಉದಕ 14; ನೀರ್ 503). 14, black (ಅಸಿತ, ಕಪ್ಪು 14). 15, an oblation (ಆಹುತಿ, ಹುತಾಹುತಿ 14; ಆಹುತಿ 503). ಬಲದಲ್ಲಿ ವಾಲಿ ಮೇಲು, ಚಲದಲ್ಲಿ ರಾಮ ಮೇಲು. — ಬಲವಿದ್ದದ್ದು ಲಯವಾದ ಮೇಲೆ ಭಯಪಡು ವದೇ ಸರಿ. — ಬಲವಿದ್ದರೂ ಕುಲಾ ನೋಡಬೇಕು. — ಬಲವಿದ್ದರೆ ನೆಲ. ಬಲವಿದ್ದಷ್ಟೇ ಹೊತ್ತರೆ ನೆಲಕ್ಕೆ ಯಾಕೆ ಬೀಳುವನು? — ಪಟ್ಟಣಕ್ಕೆ ಅರಸು ಬಲ, ಕಟ್ಟಣಕ್ಕೆ ಕಲ್ಲು ಬಲ (Prvs.). — ಬಲಗುನ್ದು. strength to decrease; to decrease in strength (My.; B. 4, 134). — ಬಲಗೊಳ್. -ಕೊಳ್. ಬಲಗೊಳ್ಳು. to get strength, to become strong (Bp. 2, 55; My.). — ಬಲಗೊಳಿಸು. to strengthen (My.). — ಬಲಂಗಿಡು. -ಒ-ಕಿಡು. strength to be destroyed or lost; to lose strength (Grj. 9, 58 va.). — ಬಲಂಗೆಯ್ಯು. to make effort (Cpr. 9, 92 va.). — ಬಲ ಪಡಿಸು. to strengthen (My.; ಬಲಿಸು G.) [— ಭಲಮ್ಬೆಱ್. -ಪೆಱ್. to obtain strength. ಮದೀಯ ವಾಗ್ಮಿಭವ ವಿನ್ಯಾಸಂ ಬಲಮ್ಬೆತ್ತುದು Ap. 1, 25]. — ಬಲರಕ್ಕಸಿ. = ಬಲರಾಕ್ಷಸಿ No. 1. (St. & Pl.). 2, a kind of eatable Arum (My.; see ಮರಸಣಿ, ಮರಸಣಿಗೆ). — ಬಲವಟು. -ಅಟು. = ಬಲಂಗಿಡು. (Cpr. 2, 42).

ಬಲಕರ bala-kara. strengthening. (My.).

ಬಲಕಾಯಿಸು balakāyisu. = ಬಲಗಾಯಿಸು. to strengthen; to increase (v. t., My., H. ಬಲ್ಕಾಯಿಸು); to grow strong (My.).

ಬಲಕ್ಷ balakṣa. = ವಲಕ್ಷ. white, etc.

ಬಲಗಾಯಿಸು balagāyisu. = ಬಲಕಾಯಿಸು. (My.).

ಬಲಗಾಱ bala-gāṟa. a strong, powerful man; a rich man (My.).

ಬಲಜ bala-ja. = ವಲಜ. *a city-gate.* 2, *a field.* 3, a pretty figure.

ಬಲಜೆ bala-je. = ವಲಜೆ. *a pretty or handsome woman.*

ಬಲದೇವ bala-dēva. *the elder brother of Kṛiṣṇa.* 2, N. (Bp. 3, 86; 9, 48).

ಬಲಬಲಿಕೆ balabalike. suffering, distress, trouble (ಪಾಡು Śm. 93; Te. ವಲ್ಪನ್ತಿ; Mhr. ಬಲಬಲ, disorder, confusion; Mhr., H. ಬಲಾಯ, misfortune).

ಬಹುವಚನ **bahu-vacana.** the plural number (Śmd. 97. 107. 111. 116. 117. 140. 151. 153. 168. 174. 182. 255. 258. 262; Kāvy. I, 5, 27-31).

ಬಹುವರ್ಣ **bahu-varṇa.** many-hued, many-coloured; many colours. (My.).

ಬಹುವಾದ್ಯ **bahu-vādya.** many or various musical instruments. ಬಹುವಾದ್ಯ ಮೊಟಿಗಲ್ ಅದು ಲಗ್ಗೆಯಕ್ಕುಂ (Mr. 288).

ಬಹುವಾರಕ **bahu-vāraka.** *the plant Cordia myxa* Lin.

ಬಹುವಿಧ **bahu-vidha.** *of many sorts or kinds, manifold, various.*

ಬಹುವ್ಯಯಿ **bahu-vyayi.** *spending much, lavish, prodigal.*

ಬಹುವ್ರೀಹಿ **bahu-vrīhi.** possessing much rice. 2, *a relative or adjective compound, a class of compounds in which the last member being a substantive loses its independence as well as its original grammatical character, and together with the first member serves only to qualify or define another word* (Śmd. 89 Mdb. Cm.; 110. 197. 219. 220; Kāvy. I, 3, 10-15. 57-59).

ಬಹುಶ **bahuśa.** = ಬಹುಶಾ. Tbh. of ಬಹುಶಸ್. (B. 4, 25; My.; also ಬಹುಶಃ, 4, 142. 188; My.). 2, perhaps.

ಬಹುಶಸ್ **bahu-śas.** much, abundantly, in great numbers, generally speaking, for the most part.

ಬಹುಶಾ **bahuśā.** = ಬಹುಶ. (My.).

ಬಹುಶ್ರುತ **bahu-śruta.** one who has heard or studied much, very learned; well versed in the vēda. (Śmd. 129).

ಬಹುಸಂಕಥನ **bahu-saṅkathana.** containing a combination (of words or sentences) in narration (Kāvy. III, 3, B, 21).

ಬಹುಸುತೆ **bahu-sute.** a woman who has many children; *the plant Asparagus racemosus* Willd.

ಬಹುಸೂತಿ **bahu-sūti.** *a cow that calves often.*

ಬಹುಸ್ವನ **bahu-svana.** making many sounds; an owl. (R.).

ಬಹುಳ **bahuḷa.** = ಬಹುಲ. (ನೆಜ³ Śm. 116). often used as a noun, muchness, abundance, multiplicity, frequency (Śmd. 78. 81), etc. (ಬಹುಳತೆ 66. 213 & 217 Cm.). ಬಹುಳದಿಂ (203. 214), ಬಹುಳದಿನ್ದೆ (212), ಬಹುಳದಿನ್ದಂ (346), ಬಹುಳದ (78. 80 Cm.).

ಬಹುಳಗ್ರಹಣ **bahuḷa-grahaṇa.** (= ಪೀನಗ್ರಹಣ, ಪ್ರಚುರಗ್ರಹಣ). the comprehensiveness of a rule (ಆದಂ Smd. 102).

ಬಹುಳತೆ **bahuḷate.** = ಬಹುಲತೆ. muchness, multiplicity, abundance; frequency; various applicability, comprehensiveness. see Śmd. 65. 78. 82. 212. 354.

ಬಹುಳತ್ವ **bahuḷatva.** = ಬಹುಲತ್ವ, ಬಹುಳತೆ. see Śmd. 66. 212.

ಬಹುಳಪಕ್ಷ **bahuḷa-pakṣa.** = ಬಹುಲ No. 6. (Bp. 61, 92).

ಬಹುಳವೃತ್ತಿ **bahuḷa-vritti.** frequent occurrence, frequency (ಬಹುಳದ ವರ್ತನೆ Śmd. 80 Cm.).

ಬಹುಳಸ್ಥಿತಿ **bahuḷa-sthiti.** = ಬಹುಳತೆ (Śmd. 78, ಬಹುಳದ ಸ್ಥಿತಿ 78 Cm.).

ಬಹೂಕ್ತಿ **bahu-ukti.** the plural number (ಬಹುವಚನ Śmd. 269 Cm.).

ಬಹೂಪಮೆ **bahu-upame.** a kind of upame [Kr. 3, 80]; (Kāvy. III, 3, B, 63 seq.).

ಬಹ್ವಾರಂಭ **bahu-ārambha.** many efforts (Cpr. 4, 59).

ಬಹ್ವಾಶಿ **bahu-āśi.** eating much; a glutton. (My.).

ಬಳ್ **baḷ.** = ಬೆಳ್ 1. whiteness, etc. — ಬಳ್ಳುಳ್ಳಿ. -ಉಳ್ಳಿ. = ಬೆಳ್ಳುಳ್ಳಿ. garlic. (ಗೃಂಜನ, ಮಹಾಕನ್ದ, ರಸೋನಕ, ಲಶುನ G.).

ಬಳ **baḷa.** 1. = ಬಳ್ಳ. a measure of capacity, etc. see ಇಬ್ಬಳ.

-ಬಳ **baḷa.** 2. = -ವಳ. see ಆಡಬಳ. an affix for the formation of masculine nouns. see ಅಡಬಳ.

ಬಳ **baḷa.** Tbh. of ಬಲ. strength, etc. (Śmd. 25). [ಅಳವಿ ಬಳೆಯೆ ಬಳವೆಸಕಮದೋರನ್ತೆ ಜನಂಗಳ ಕರ್ಜೋಃಪಾನ್ತದೊಳೊಗೆದೆಸೆಯೆ Pb. 1, 98]. see ಬಲ್ಪಳ. — ಬಳಗೂಡು. -ಕೂಡು. to join troops (Rśv. 13, 4). — ಬಳನನುಜ. -ಅನುಜ. Krisna (Grj. 4, 71). — ಬಳಮದ್ದು. = ಬಳವರ್ಮ. q. v. — ಬಳಮುರ್ಮ. (ಅಂಕದಾಷಧ Śmd. II; Śm. 39; ಜಗಳದ ಮದ್ದು G.). gun-powder (?). — ಬಳವರ್ಮ. = ಬಳಮುರ್ಮ. (ಅಂಕದಾಷಧ Kk. 84, o. r. ಬಳಮದ್ದು).

ಬಳಕ **baḷaka.** = ಬೆಳುಕ, q. v.

ಬಳಕಿಸು **baḷakisu.** = ಬಳುಕಿಸು. to shake (v. t.), as a long split of bamboo, a thin blade of a sword, etc. (My.).

ಬಳಕು **baḷaku.** = ಒಣಕು 2, ಬಳಿಕು, ಬಳುಕು 1, ಬಳ್ಕು 1. to shake (v. i., My.); to tremble [Tu. ಪಳ್ಕ್]; (Bp. 26, 30).

ಬಳಗ **baḷaga.** a mass, a multitude, an assemblage, a troop, etc. [ನೆರೆವರಸು ಮಕ್ಕಳ ನಿಡುಗಣ್ಗಳ ಬಳಗವಾಜಿಗೆ ತನ್ನಯ ಮೆಯ್ಯೊಳ್ Pb. 3, 51; Ap. 2, 62 va.]; (ಗೊನ್ದಣ, ತೆರಳ್ಕೆ, ವಂಗಡ, ಪಿಣ್ಡು, ಬಪ್ಪಲ್, ಗಡಣ, etc., ಶ್ರೇಣಿಕೆ Śm. 54; ಜಂಗುಳಿ, ವಂಗಡ, ಬಪ್ಪಲ್, ಹರಿ, etc., ಶ್ರೇಣಿಕೆ Kk. 17; My.; Tu.; Te. ಬಲಗ);— the family-circle, relations (My.; Te.). see Cpr. 7, 62 va.; Bp. 58, 28; 59, 50; J. 3, 8. 25. 38; 8, 3; 28, 43.

ಬಳಂಕು **baḷaṅku.** = ಬಳ್ಕು 2, etc. to bend (v. i., Grj. 1, 86; T. ವಳೈ, M. ವಳಿ).

ಬಳಪ **baḷapa.** = ಬಳಹ, ಬಳಾಪ. a whitish pot-stone, Lapis ollaris, frequently used (as a substitute for slate pencil, etc.) in writing (ಶುಭ್ರೋಪಲ Mr. 359, o. r. ಬಳಹ; My.; Tu.; T. ಪಲಪ್ಪ, ವಲಪ್ಪ; Te. ಬಲಪ). — ಬಳಪಂಗೊಳ್. -ಕೊಳ್. to seize the pot-stone pencil. ಸವಣಂ ಬಳಪಂಗೊಳೆ, ಗಾಣ್ಡಿವಿ ಬಿಲ್ಗೊಳೆ, ಬಲವಿರೋಧಿ ವಜ್ರಂಗೊಳೆ, ದಾನವರಿಪು ಚಕ್ರಂಗೊಳೆ, ಕಾರವಾರಿ ಗದೆಗೊಳೆ, ಪೊಣರ್ಕೆಗಾವಂ ನಿಲ್ಪಂ? (Śmd. 200).

ಬಳಬೆ **baḷabe.** = ಬಣಮ್ಬೆ, etc., ಬಳುವೆ. a stack, a rick. ಕರಡದ ಬಳಬೆ (Bhāgavata 3, 2, 40).

ಬಳಯಿಸು **baḷayisu.** (fr. ಬಳೆ 1). = ಬಳೆಯಿಸು. to cause to increase; to cause to abound; to cause to grow (Cpr. 1, 86; 5, 11; 8, 60; Abh. P. 15, 58; Grj. 3, 119 va.). (ಮಾಮರಂ) ಕಾಯ್ಗಳಿನರದೊರ್ಮೆ, ಪಣ್ಗಳಿನದೊರ್ಮೆ ಜನಕ್ಕೆ ಮನಃಪ್ರಮೋದಮಂ ಬಳಯಿಸಿ, ಮಾಣದಿತ್ತು ಸವಿಯಂ (Cpr. 7, 48).

ಬಳಲ್ **baḷal.** — ಬಳಲೊಡುಗಿನ ಮರ. a shrub or small tree yielding a red dye, Symplocos racemosa Roxb. (St. & Pl.).

ಬಳವನ್ತ **baḷa-vanta.** = ಬಲವನ್ತ. a strong man. (Grj. 1, 108).

*ಬಳವಳ **baḷavaḷa.** very much. ಅಳವಳಿಯದೆಗ್ಗು ಬಳವಳ ಬಳೆವಿನಗಂ Pb. 6, 46. (T. ವಳವಳ).

ಬಳವಿ **baḷe-vi.** increase, growth (Śmd. 247. 255; Cpr. 6, 64 va.). (T. ವಳಪ್ಪ, ವಳಮ್ಪೈ; Tu. ಬುಳಕ್ಕೆ). [ಅಳವಿಗಳೆದಲಮ್ಪುಮಂ ಬಳವಿವಡೆದಟ್ಟುಜುಮನೋರೊರ್ವರೊಳ್ ನೆಜೆದು Ap. 4, 52 va.]. ತನು ಜನ ಬಳವಿಯನೆ ನೋಡಿ, ಜನಕಂ ನಲಿದಂ (Śmd. 256).

ಬಳವಿಗೆ **baḷavige.** = ಬಳವಿ, ಬಳೆವಿಗೆ. (ಸುತರ ಪೆರ್ಚು Ct. I, 53).

*ಬಳಸಿ **baḷasi.** a round circle. ಚಮರಿಯನರ್ದಿ ತೆಗೆದು ಬಳಸಿಯಂ ಬೀಸಿದಾಗಲ್ Vr. 68, 5.

**ಬಳಸಿಗ baḷasiga.** ? (Śmd. 40).

**ಬಳಸು baḷasu. 1.** to go in a circle or round, to move round; to have a circular motion (Rśv. 6, 11 va.); to walk or wander about (Bp. 16, 18; 18, 40; J. 3, 28); to go round, as a rēpha round a consonant (Śmd. 345; ಭ್ರಮ ಣ Śmd. Dh.; ಸುತ್ತು 345; ತಿರುಗು Śm. 110; Mhr. ವಳಣೇಂ, to turn, move round; *cf.* Sk. ವಲ್); to turn round or take one's course towards (Bp. 43, 60). 2, to be surrounded (Bp. 56, 38; J. 3, 3); to be wrapped up (Bh. 1, 10, 25). 3, to go round, to circumambulate (Bp. 23, 18; 39, 7; 41, 22; 60, 28; 58, 23; 60, 32; Bh. 3, 13, 27; Rām. 1, 16, 52); to surround; to environ (Rśv. 13, 59 va., twice; Bp. 54, 19; J. 3, 22; 5, 12; 6, 1; Si. 93); to cover (Rśv. 2, 35); to be in one's company (Bp. 44, 52; Rśv. 4, 14 va.). [ಶ್ರೀ ತಳ್ತುರದೊಳ್ ಕೌಸ್ತುಭಜಾತದ್ಯುತಿ ಬಳಸಿ ಕಾಣ್ಬ ಪಟವದ್ದಿರೆ Kr. 1, 1; Pb. 14, 10 va.; Bv. 894]. ಬಳಸಿ ಬಪ್ಪುದು (ಕವ್ವರೆ Kk. 59). see Cpr. 1, 73; 1, 101 va.; 1, 109. 111. 136; 2, 69. 86; Abh. P. 5, 53 va.; 11, 82 va.; 12, 95; ತಲೆವಳಸು; ಮೂವಳಸು 1.— ಬಳಸು ಬಳಸು. rep. (Bp. 58, 23; 60, 32).

**ಬಳಸು baḷasu. 2.** = ಬಾಚಿ. (Śmd. 40). the act of surrounding or encompassing (Bh. 2, 2, 103); the state of being round about [ಅಗಳಕ್ಷತ್ಥಾಮಂ ಭೀಮೋದ್ದಾಮ ಶ್ಯಾಮ ಜಳಧರ ವಿಮುಕ್ತ ಶರಾವಳಿಯ ಬಳಸಂ ಕಣ್ಬು Pb. 12, 67 va.]; (Abh. P. 3, 87; 4, 128 va.; 5, 53 va.; see ಪೊಱ-). 2, what surrounds: a kind of bodice, a coat of mail (ಕಂಚುಕಾಂಗ Śmd. Dh.; ಕಂಚುಕಿ Śm. 110). ಗರುಡಿಯ ಬಳಸಿಂ, ಬಿಜ್ಜೋದರಗಳದಿನ್ದೆ, ಆನೆ ಹೋರಲಿಕ್ಕಿದ ತಱಯಿಂ (Śmd. 131). 3, the state of being circuitous; as a road (My.). 4, one round or turn, as of a rope, a dōtra, a sīre, etc. (My.). 5, a turn in serving up dinner (My.). see ಮೂವಳಸು 2.

**ಬಳಹ baḷaha.** = ಬಳಪ, etc. a slate pencil, etc. (Bp. 31, 3. 10; Bh. 1, 1, 9; My.; see Mr. s. ಬಳಪ).

ಬಳಹರಿ baḷa-hari. (= ಬಳಾರಿ). — ಬಳಹರಿಮಾರಿ. N. (Bp. 23, 19).

**ಬಳಾಪ baḷāpa.** = ಬಳಪ, etc. a slate pencil, etc. (My.).

ಬಳಾಯಿ baḷāyi. (ಧವಲ Cb. 63).

ಬಳಾರಿ baḷāri. = ಬಳಹರಿ. the demon Baḷāri or Mahākāḷi (ಮಹಾ ಕಾಳಿ Ct. II, 119). ಆತನ ಬಲಿಗಟ್ಟಿ, ಮನ್ಮಥಬಳಾರಿಗೆ ಪೆರ್ಗುಱು ಮಾಡಿ, ಪೊಯ್ಯಪೆಂ (Rśv. 11, 165).

***ಬಳಿ baḷi. 1.** = ಬಱಿ 1 No. 5. a lineage, family. ಹರಸು ಮೂ ಲಿಗನಾಗಿ ಪುರಾತರೊಳಗಾಗಿ ಬಳಿ ಬಳಿಯಲು ಬನ್ದ ಮಾದಾರನ ಮಗ ನಾನಯ್ಯ Bv. 347. — ಬಳಿದೊತ್ತು. -ತೊತ್ತು. a slave or servant who serves a family from generations. ಬಳಿದೊತ್ತು, ಬಳಗದೊತ್ತು, ವಂಶದೊತ್ತು ನಾನಯ್ಯ Bv. 353.

***ಬಳಿ baḷi. 2.** = ಬಱಿ 1 No. 1. ಬಳಿದಪ್ಪಿದ ಪಶು ತನ್ನ ಹಿಣ್ಡಸರಸು ವನ್ತೆ Bv. 347.— ಬಳಿವಿಡಿ. -ಹಿಡಿ. = ಬಱಿವಿಡಿ. to follow. ನಿಮ್ಮ ಶರಣರ ಬಳಿವಿಡಿವರೆ ಎನ್ನ ವಸ್ತುಗ ಹಿಂಗುವುದು Bv. 37. —ಬಳಿಸಲ್. = ಬಱಿ ಸಲ್. to go after, chase. ಕಾಯ್ದು ಕೆಮ್ಮಗೆ ಬಳಿಸನ್ದು ಕೊನ್ದಪನ ಕಾರಣದಿಂ ಮೋಹದೊಳ್ ಮನೋಭವಾ Ap. 12, 34.

**ಬಳಿಕು baḷiku.** = ಬಳ್ಕು 1, etc. to shake, etc. (Bp. 55, 10).

**ಬಳಿಂಕ baḷiṅka.** (?). a part of a ship (? Mr. 408, text corrupt).

**ಬಳಿದು baḷidu.** the state of being (bent or) sloping, as a roof (My.); the state of not being steep or of gradual ascent, as a hill (My.); that of inclining from a horizontal direction, as the haft of a hoe, etc. (My.; T. ವಳವು).

***ಬಳಿವಳಿ baḷivaḷi.** [*cf.* ಬಱುವಱು]. a present made to the bridegroom by bride's parents in giving her away. ತಮ್ಮ ಮನೆಯೊಳುಳ್ಳನರ್ಘ್ಯ ರತ್ನಂಗಳೆಲ್ಲಮಂ ಬಳಿವಳಿಗೊಟ್ಟು ಪೆಱ್ಗ್ಗೊಣ್ಡು ಪೋದರ್ Ap. 13. 80 va.

**ಬಳುಕಿಸು baḷukisu.** = ಬಳಕಿಸು. to shake, etc. (My.).

**ಬಳುಕು baḷuku. 1.** = ಬಳಕು, etc. to shake, etc. (Bp. 14, 17; 38, 30; My.).

**ಬಳುಕು baḷuku. 2.** = ಬಳ್ಕು 2, etc. to bend. ಉಪ್ಪವಾಗಿ ಬಳುಕಿದುದು (ಬನ್ಧುರ, ಉನ್ನತಾಸತ Nr.). ಉರಗರಾಜನ ಹೆಡೆ ಬಳುಕಿ ವಡೆ (Bp. 11, 12).

**ಬಳುಂಕು baḷuṅku.** = ಬಳುಕು 2, etc. (Grj. 5, 42 va.). ಚನ್ದ್ರ ಕೀರ್ತಿ ಬಳುಂಕಿದನು, ರಾಜೇನ್ದ್ರಮುನಿ ಕೊಂಕಿದನು (Bp. 52, 18). ಬಡ ನಡು ಬಳುಂಕೆ (Rśv. 10, 7).

**ಬಳುವೆ baḷuve.** = ಬಳಬೆ, etc. a large heap (Rām. 6. 55, 15).

**ಬಳುವಳಿಕೆ baḷuvaḷike.** increase, growth (Cpr. 4, 2).

**ಬಳುವು baḷuvu.** heaviness, weight (My.; T. ಪಳುವು).

**ಬಳೆ baḷe. 1.** (= ಬೆಳೆ 1; *cf.* ಬಲಿ 1). to increase, to become large, to grow up, to prosper (used only with regard to man and other animals and their bodies according to Śmd. 256; ಪ್ರವೃದ್ಧಿ Śmd. Dh.; ವೃದ್ಧಿ Śm. 114; Cpr. 1, 91; 3, 104; Grj. 4, 2. 38; Tu. ಬುಳೆ; T., M. ವಳರು). [ಇಪ್ಪ್ರೇನ್ದ್ರನ ತೋಳೆ ತೊಟ್ಟಿಲಾಗಿರೆ ಬಳೆದಂ Pb. 1, 44; Ap. 2, 37 va.]. ಬಾಲಭಾವದೊಳೆ ಭಾವಕಿಯರ್ ಬಳೆವರ್ ನಿರನ್ತರಂ (Śmd. 230). ಮೃದುಮುಗ್ಧಾಲಾಪಂ ಬಳೆದಂ ಸರಸ್ವತೀಮಣಿ ಹಾರಂ (255). ಎನಿತ್ತೆ ನಿತ್ತು ಅಮ್ಮು ಜಪತ್ರನೇತ್ರೆಯಾ ಫನಸ್ತನಂಗಳ್ ಬಳೆಗುಂ ಕಿರಾತೆಯಾ, ಅನಿತ್ತನಿತ್ತಂ ವನದೊಳ್ ವನೇಚರಂ ತನತ್ತು ಬಿಲ್ಲಾನದನ್ ಅನ್ತೆ ಕೀಸುಗುಂ (144). (ಆ ಕುಮಾರರ್) ಇನ್ತು ಬಳೆವುತ್ತಮಿರೆಯೊರೆ (Rśv. 4, 75 va.). ಉತ್ತಮನೃಪಸುತ — ಮನ್ತ್ರಿಪುತ್ರ ರ್ವರ್ ಬಳೆದರ್ (4, 78). ನೃಪೋತ್ತಮನ ಸುಕುಮಾರಿ ವಿಂಗೆ ಬಳೆವುತ್ತಿರ್ದಳು (Prll. 3, 23). [ಜನಕ್ಕೆ ಬೇಟಮಂ ಬಳೆವುದು Pb. 1, 54]. Note: the meaning of ಬಳೆ 1 appears in Cpr. 1, 82. 90; 1, 101 va.; 2, 91; 3, 12; 5, 49.

**ಬಳೆ baḷe. 2.** = ಬೆಳು, etc. whiteness, etc. — ಬಳೆಗಾರ. -ಕಾರ. = ಬೆಳುಗಾರ. (S. Mhr.).

***ಬಳೆ baḷe. 3.** the neck bone. ಬಳೆ ಸುರ್ಗುತ್ತಿರೆ ಮುಟ್ಟೆ ಗಣ್ಡಲಂ Pb. 12, 150.

ಬಳೆ baḷe. Tbh. of ವಲಯ. a ring; an armlet, an armring, a bracelet of glass, etc. for females (ಬಾಹಭೂಷಣ Śmd. Dh.; ತಾಳೆಯರ ಕಾಜವಲಯ Śm. 114; ಪ್ರತಿಸರ Mr. 340; [ಮುಂಗೆಯ್ಯೊಳ ಕರ್ಪೂರ ಕೀನ ತೊಟ್ಟ ಬಳೆಗಳ್ ಮುಱಿಸೆ Pb. 3, 55 va.]; ನೃತ್ತಿಕೆ 285; Cpr. 8, 64; C.; M. ವಳ, T. ವಳ್ಯೆ; Mhr. ವಾಳಾ). ದನ್ತದ ಬಳೆ (Rśv. 5, 24). ಸಿಗ್ಗದ ಬಳೆಗಳ್ (Raghc. 17, 65). ಯೂಪಸ್ತಮ್ಭದಲ್ಲಿ ಮರ ದಿನ್ದ ಮಾಡಲ್ ಪಟ್ಟ ಬಳೆ (ಚಷಾಲ, ಯೂಪ ಕಟಕ Si. 238). ಚಕ್ರದ ಕಣ್ಣುಗಣ್ಣೆ, ನೊಗ, ಅಚ್ಚು, ಕಡಾಣಿ, ಬಳೆ ಮುನ್ತಾದ ಬಣ್ಡಿಯ ಅವಯವ ಗಳು (ಅಪಸ್ಕರ); ಬಣ್ಡಿಯ ಚಕ್ರದಲ್ಲಿ ಅಚ್ಚು ಸೇರುವ ಕಣ್ಣಿನ ಸುತ್ತು ಲೋಹದ ಬಳೆ (ನೇಮಿ, etc. 276). ಕುದುರೆಯಾಯ ಪೊಜಗಣ ಬಳೆ (ಕವಿ

Śm. 109). ಬಿರಿದಿನ ಬಳೆ (ಕಚ್ಚಱ Kk. 75). ಬಳೆಗಳ್ ಗುಲ್ಲುಲ್ಲು ಲ್ಲನೆ ಗಿಳಿ ಸೋಙಾಕೆಗಳಿನ್ ಒಪ್ಪುಗುಂ ಕೆಲವಡೆಯೊಳ್ (Śmd. 231). see ಕೆಯ್-, ಪಾಱುಮ್-, ಬಾಹು-; B. 4, 122; Prvs. s. ಬಾಱು 1, ಸನ್ತೆ 1. 2, a series (in algebra, B. 1, 11; Mhr. ವಲ್ಲೀ). — ಬಳೆಗಡಕ ಹಾವು. -ಕಡಕ್-. = ಬಳೆವಡಕಹಾವು. (B. 2, 26) — ಬಳೆದುಡು. -ತುಡು. to put on a ring. ಬಳೆದೊಟ್ಟಂ (Śmd. 200). — ಬಳೆದೊಡಿಸು. -ತೊಡಿಸು. to cause to put on a ring or rings (C. Bp. 47, 42). — ಬಳೆಮಲಾರ. the bundle of glass rings strung on strings that is carried by bracelet vendors (My.). — ಬಳೆಯವ. -ಅವ. a bracelet maker; a bracelet vendor (My.). — ಬಳೆಯುಪ್ಪು. -ಉಪ್ಪು. a sort of salt (ವಸು Mr. 143; My.). — ಬಳೆವಡಕ ಗಿಡ. (-ಒಡಕ್-). a prostrate herb, the spreading hog-weed, Boerhavia diffusa Lin. (Z.; St. & Pl. as ಬಳೆವಡಕಿ-). — ಬಳೆವಡಕಹಾವು. -ಒಡಕ್-. a venomous snake, the Trimeresurus anemallensis (Bd.); the venomous snake Dipsas gokool (Bd.). — ಬಳೆವೊಡಕಹಾವು. = ಬಳೆವಡಕಹಾವು. (My.). [—ಬಳೆವೋಗು. -ಪೋಗು. to fall off in circular sections. ಕಟ್ಟಿದಿರೊಳೆ ನೂಂಕಿದಾನೆಗಳ ಕೋಡುಗಳಂ ಬಳೆವೋಗೆ ಪೊಯ್ದುದಂ Pb. 10, 41].

**ಬಳೆಗಾಱ baḷe-gāṟa.** = ಬಳೆಯವ. (Śmd. 235; Rām. 5, 8, 51; C.). ಬಳೆಗಾಱನ ಅಂಗಡೀಲಿ ಬಾಚೀ ಹಣ್ಣು ಸಿಕ್ಕೀತೇ?— ಬಳೆಗಾಱನ ಮೊಟ್ಟೆ ಕೆಳಕ್ಕೆ ಬಿದ್ದರೆ ತೆಗೆಯಲಿಕ್ಕೆ ಹೆಡಿಗೆ ಬೇಕು (Prvs.).

**ಬಳೆಗಾರ್ತಿ baḷe-gārti.** (Śmd. 246). a female bracelet maker and vendor (My.).

**ಬಳೆಯಿಸು baḷeyisu.** = ಬಳೆಯಿಸು. to cause to increase. (Cpr. 1, 91; 5, 126).

**ಬಳೆವಿಗೆ baḷevige.** = ಬಳವಿಗೆ. growth, etc. (Cpr. 1, 101 va.).

**ಬಳ್ಕಿಸು baḷkisu.** to cause to bend, to bend (v. t., Cpr. 7, 107).

**ಬಳ್ಕು baḷku. 1.** = ಬಳಕು, etc., (ಅಳುಕು 5). to shake (v. i.); to tremble; to fear [ಮುತ್ತಿನ ಕೇಡನ ನೋಡಿ ನೋಡಿ ಬಳ್ಕುತ್ತಿರೆಯೇವಮಿಲ್ಲದಿವನಾಯ್ತುದೊ Pb. 9, 69]; (ಭಯವನ್ ಆನ್ Kk. 72; ಸೆಡೆ, ಅಳ್ಕು, ಸುಗಿ, ಬೆಮರ್, ಸುರುಳ್, ಅಗಿ, ಭಯವನ್ ಆನ್ Śm. 40).

**ಬಳ್ಕು baḷku. 2.** = ಬಗ್ಗು 2, ಬಳಂಕು, ಬಳುಕು 2, ಬಳುಂಕು. to bend (v. i., ನಮನ Śmd. Dh.; Grj. 2, 106 va.). [ತೂಗಿ ಪಣ್ಗೊಂಗಲೆಯಿಂ ಬಳ್ಕುವ ಕೌಂಗು Ap. 1, 67]; (Cpr. 10, 11). ಬಾಜ್ಕಿಣಂ ಪೊಡರೆ ಬಳ್ಕುವ ಸಮ್ಮನ ಶೂಲವಾಲದೊಳ್ (Śmd. 204, o. r. ಬಜ್ಕುವ). ಬಳ್ಕುವ ನಡುವು (Rśv. 5, 87). ಫಣಿರಾಜಂ ಬಳ್ಕೆ (6, 11). ತೆಳ್ಪಡು ಬಳ್ಕೆ (7, 17). ಬಾಲಂ ಮೇಣ್ ಬಳ್ಕೆ (9, 29). ತಾನ್ ಅಳ್ಕಿ, ಬಳ್ಕಿ (J. 6, 28).

**ಬಳ್ಕುಡಿ baḷkuḍi.** = ಬಕ್ಕುಡಿ 2, q. v. fear (ಗುರ್ವು, ಬೆಗರ್, ಬೆಬ್ಬಳ, ಅಳಿರ್, etc., ಭಯ Śs.).

**ಬಳ್ಪಳ baḷpaḷa.** (= ಬೆಳವಲ). growth (ಬೆಳವುದು Ct. II, 37). ತೊಳಪ ದನ್ತ ಮರೀಚಿಸನ್ತತಿ ಪರ್ವೆ ಬಳ್ಪಳ (ಂ) ಸೀಳ್ದು (Śmd. 275 Mdb.).

**ಬಳ್ಪಳಿಕೆ baḷpaḷike.** growth, greatness; or great lustre (cf. ಬೆಳ್ಪಳ; Cpr. 8, 51 va.).

***ಬಳ್ವಳ baḷvaḷa.** = ಬಳವಳ. abundantly. [ದೆಸೆಗಳಂ ತಡವರಿಸಿಕೊಳ್ಳನ್ತೆ ಬಳ್ವಳ ಬಳೆದು ಸೊಗಯಿಸುವ ಪೆರ್ಮರಂಗಳಿನ್ನಂ Pb. 7, 29 va.; Ap. 8, 67]; (Cpr. 5, 127).

***ಬಳ್ವಳಿಕೆ baḷvaḷike.** = ಬಳುವಳಿಕೆ. ಕೆಯ್ಯ ಬಳ್ವಳಿಕೆಗೆ ದಿಗ್ಗಜಂ ದೆಸೆಯಿನತ್ತ ತೆರಳ್ದುವು Pb. 11, 71; Ap. 12, 39.

**ಬಳ್ಳ baḷḷa.** = ಬಳ 1. a measure of capacity, the 4th part of a koḷaga or 4 mānas (C.; Mr. 355, see s. ಪಾಗ and ಖರ್ವ; ಶಿವ Mr. 206; ಪ್ರಸ್ಥ Hlā., Nr., Nn. 108, Mr. 472, Si. 329, 429; Tu., T. ವಳ್ಳ; M. ವಲ್ಲ; Te. ಬಳ್ಲ; T., M. ವಳ್ಳ also: a canoe or boat of one trunk; a brazen charger or eating dish; Te. ವಲ್ಲ, a purse; M. ವಲ್ಲ = Sk. ಪಲ್ಲ, a large bamboo basket to hold grain, etc.). [ಸೆಟ್ಟಿಯ ಬಳ್ಳಂ ಕಿಱಿದೆಮ್ಮುದೊನ್ದು ನುಡಿಯಂ ನೀ ನಿಕ್ಕುವಂ ಮಾಡಿದ್ದೆ Pb. 12, 175; Vr. 20, 11. ಬೆಳ್ಳಿಗೆ ಆವಿನ ಕಱುವೆನ್ನೊಡೆ ಬಳ್ಳವಾಲ ಕಱೆವುದೆ? Bv. 327; Cv. 73]. ಬಳ್ಳವೆಱು (Śmd. I). see Bp. 9, 17; 42, 5; V. 9, 71 va.; J. 2, 27; Prv. s. ಬೆಳಸು 1. — ಬಳ್ಳದ ಮರ. a cross piece of wood on the wheel of an idol car (My.) — ಬಳ್ಳಾರಿ. N. of a town in Mysore (My.; B. 3, 46; 5, 122). — ಬಳ್ಳೇಶ್ವರ. -ಈಶ್ವರ. N. (Bp. 9, 11). ಬಳ್ಳೇಶ್ವರನ ಮಲ್ಲಯ್ಯ (Bp. 9, 46; 47, 38).

***ಬಳ್ಳ baḷḷa.** a thing forbidden to eat. ಅಂಗದಿಚ್ಛೆಗೆ ಮದ್ಯಮಾಂಸ ಬಳ್ಳಬಂಗಿಯ ತಿಮ್ಬುರು Cv. 474.

**ಬಳ್ವಳ್ಳಿ (baḷa-baḷḷi, i. e. baḷḷi-baḷḷi).** creepers and creepers, i. e. turnings and turnings [ಸುರತ ಸುಖದ ಬಳ್ಳಿವಳ್ಳಿಯೆ:ನಿಪ ಬಳ್ಳಿ ಮಾಡದಿಂ Pb. 1, 58; Ap. 2, 50]; (Abh. P. 3, 115; 12, 87).

**ಬಳ್ಳಾಳ baḷḷāḷa.** = ಬಲ್ಲಾಳ. a N. 2, a dynasty. (My.).

**ಬಳ್ಳಿ baḷḷi.** Tbh. of ವಲ್ಲಿ a creeper, a vine (ಲತೆ, ಪ್ರತಾನಿನಿ, ವಲ್ಲಿ, ಪ್ರತತಿ, ವ್ರತತಿ Hlā.; ಲತೆ Nn. 31; ವಲ್ಲಿ 102; ವಲ್ಲಿ, etc. Mr. 106; C.; Te., ವಲ್ಲಿ; T., M. ವಳ್ಳಿ). ಎಲೆಯ ಬಳ್ಳಿ (ತಾಮ್ಬೂಲವಲ್ಲಿ Hlā.). ನೀರಜದ ಕೈರವದ ಬಳ್ಳಿ (ಬಿಸಿನಿ Mr. 420). ಬೀಱೀ ನೆಯ್ದಿಲೇ ಬಳ್ಳಿ (ಕುಮುದ್ವತಿ, etc.); ತಾವರೇ ಬಳ್ಳಿ (ನಲಿನಿ, etc. Si. 95). ಮರ ಗಿಡು ಬಳ್ಳಿ ಪುಲ್ ಪೊದಱ್ (Śmd. 89. 113. 129). ಬಳ್ಳಿ ಹಿಡಿದು, ಕಾಯಿ ಕೊಯ್ಯಬೇಕು (Prv.). see ಅಲರ್ವಳ್ಳಿ, ಎಳೆವಳ್ಳಿ; C. Bp. 11, 5; Śsv. 3, 33; 4, 23. — ಬಳ್ಳಿಗಱುಕೆ. -ಕಱುಕೆ. white bent-grass, Panicum dactylon (ಗಣ್ಡಾಲಿ, ಶಕುಲಾಕ್ಷಕ Nr.). [— ಬಳ್ಳಿಗಾವಣ. -ಕಾವಣ. a pandal of creepers. ಬೀಡುದಾಣಂಗಳೊಳಕ್ಕಿದ ಬಳ್ಳಿಗಾವಣಂಗಳೊಳಂ... ವಿಶ್ರಮಿಸುತ್ತುಂ Pb. 2, 97 va.; Ap. 11, 73 va.]. — ಬಳ್ಳಿದುಱುಚೆ. -ತುಱುಚೆ. = ಬಳ್ಳಿದುಱುಚೆ. (ಯಾಸ, ಯವಾಸ, etc. Si. 144). — ಬಳ್ಳಿದುಱುಚೆ. -ತುಱುಚೆ. the plant Alhagi maurorum Tournef. (ಯಾಸ, ಯವಾಸ, ದುಃಸ್ಪರ್ಶ, ಧನ್ವಯಾಸ, etc. Nr.). — ಬಳ್ಳಿಬಚ್ಚಲಿ. (ಕಲಮ್ಬಿ Si. 162). — ಬಳ್ಳಿಮಾಡ. Tbh. of ವಲ್ಲಿಮಾಟ (Śmd. 380). [ಸುರತ ಸುಖದ ಬಳ್ಳಿವಳ್ಳಿಯೆನಿಪ ಬಳ್ಳಿಮಾಡದಿಂ Pb. 1, 58]. see Cpr. 6, 88 va.; V. 5, 6; 9, 7. — ಬಳ್ಳಿಮಾವು. a kind of mango tree (Cpr. 6, 88 va.; 8, 73 va.). — ಬಳ್ಳಿಮಿಂಚು. chain-lightning, lightning in zigzag [ಕಾಱುಮುಗಿಲ್ ಬಳ್ಳಿ ಮಿಂಚಿನಿನ್ದುಳ್ಕುವ ಪೋಲ್ Pb. 10, 84]; (Abh. P. 13, 76; Bp. 11, 34; Rśv. 5, 19 va.; Bh. 6, 1, 6). — ಬಳ್ಳಿಮೀನು. a polyp (? Si. 88). — ಬಳ್ಳಿವರಿ. -ಪರಿ. a creeper to spread out or run: to spread like a creeper (Grj. 2, 106 va.; 3, 26 va.; Rśv. 4, 14 va.; 7, 17 va.). — ಬಳ್ಳಿವಬ್ಬು. -ಪಬ್ಬು. = ಬಳ್ಳಿವರಿ. (Cpr. 8, 44 va.). — ಬಳ್ಳಿವಲೆ. -ಬಲೆ. a kind of net (Rśv. 5, 114 va.). — ಬಳ್ಳಿವಸಲೆ. -ಪಸಲೆ. a green spot of creepers (Cpr. 8, 4 va.). — ಬಳ್ಳಿವೆಳಗು. -ಬೆಳಗು. zigzag-light (Grj. 5, 61; 5, 76 va.; Rśv. 6, 11 va.; 13, 77 va.).

**ಬಳ್ಳು baḷḷu.** = ಬಳ್ಳು 2, q. v. a jackal [ಭೀಮಸೇನಂ ಮುನ್ನಂ ಕುಡಿದುದಱಂ ನೆತ್ತರಂ ಪಡೆಯದಾಶಾಶಕ್ಕೆ ಬಾಯಂ ಕಱೆದೊಳ್ಪ ಬಳ್ಳುಗಳುಮಂ Pb. 13, 56 va.; ಕಾನನದಡವಿಯಲ್ಲಿ ಕಿಚ್ಚು ಬಾಳುವೆಯಾಗಿ ಮಿಕ್ಕೊಡೆ ಒಱಲುವ ಬಳ್ಳುವಿನನ್ತಪ್ಪರಯ್ಯ Bv. 327]; (ಭೂರಿಮಾಯ, ಗೋಮಾಯು Mr. 162; Abh. P. 14, 122; J. 19, 3; My.; Tu. ಪಳ್ಳು; Te. ವರದು, ವರುದು, an old fox; M. ವವ್ವಾಯ್, ವವ್ವಾಲಿ, a fox; Mhr ಭಾಲೂ,

a bear; an old female jackal; *cf.* ಭಲ್ಲ No. 2). [— ಬಳ್ಳುಗೆಡೆ. -ಕೆಡೆ. to lie down cunningly? ಕಡಿತಲೆಯ ನಾಯಕರ್ ಕಯ್ಯೊಳ್ಬು ಬಳ್ಳುಗೆಡೆದೆಕ್ಕವಾಱುವಾಱು... ಕಾದೆ Pb. 10, 80 va.].

**ಬಳ್ಳೆ balle.** N. of a plant (ಕುಳಲತೆ Mr. 149). — ಬಳ್ಳೆಸೊಪ್ಪು. = ಬಳ್ಳೆ. (My.). ಬಡಾಯಿ ಬಡಾಯಿ, (ನಿನಗೆ) ಬಳ್ಳೆಸೊಪ್ಪು, ಸೋತ ಪುರುಕಿಗೆ ಸೋರೆಸೊಪ್ಪು (Prv.).

**ಬಳ್ baḷ.** (= ಬಾಳ್ 1). to live (ಜೀವಿಸು Śmd. I). ಬಳ್ದಂ (49). [ಈ ರತ್ನಾಕರದೊಳ್ ಪುತ್ರಿಕೆಯೆನೆ ಬಳ್ದಿಳಿನ್ತು ಬಾಳ್ಬುದೆ ಚೋದ್ಯಂ Kr. 2, 36; ಕುರುಬಲಮುಮ್ಬುದೀ ಸುರನದೀಜನ ತೋಳ್ಸಲಮುಮ್ಬು ವಜ್ರ ಪಂಜರದೊಳಗಿರ್ದು ಬಳ್ದಪುದು Pb. 11, 37]. ಬಳ್ದಿಲ್ (Cpr. 1, 101 va.). ದೈವದಿಂ ಬಳ್ದಂ (Śmd. 157). ಬಳ್ದುದು ಬಲ್ಲವಾಡಿ (38). ಬೇಟ ಮಂ ಪಡೆದನ? ಬಾಳ್ದೆ? ಬಾಳ್ಬಡಿನಿತಿಲ್ಲದ ಬಾಳ್ಪಿಣನೇಕೆ ಬಳ್ದಪಂ? (81 Mdb.). 2, to begin to live prosperously (ಒಕ್ಕಲಾಗು Śmd. I).

**ಬಳ baḷa. 1.** = ಬಳ್ 1, etc. — ಬಳವಲಿ. = ಬಳವಟ್ಟಿ. (G.). — ಬಳ ವಟ್ಟಿ. = ಬಳುವಟು. (ಯೌತಕಾದಿಯದ್ದೆಯಂ, ಸುದಾಯ, ಹರಣ, ಮದಿ ವೆ ಮುನ್ನಾದವುಗಳಲ್ಲಿ ಮಗಳಿಗೂ ಅಳಿಯನಿಗೂ ಕೊಡತಕ್ಕ, ಬಳವಟ್ಟಿ ಮುನ್ನಾದ ಬಹುಮಾನ Si. 266, *only* in Si.).

**ಬಳ baḷa. 2.** = ಬಳು 2. short P. p. of ಬಳ್ 4, in ಬಳ ಕೊಳ್ಳು (My.).

**ಬಳಕೆ baḷake.** = (ಪಳಕೆ), ಬಳಕೆ No. 1. course, way of action, plan, contrivance (Bh. 1, 8, 61. 76). 2, use; custom, practice; exercise; the state of being well known or understood by practice; conversancy with; intimate and frequent converse or association, familiarity, familiar intercourse (Śmd. 262, v. 224, which is an *interpolation*, as it does not occur in Mdb.; My.; B. 5, 155; T. ಪಞಕ್ಕ, ವಞಕ್ಕ, ವಞ). ಬಳಕೆಯಿಲ್ಲದಲ್ಲಿ ಬಾಬಬಹುದು, ಚಳೀ ಕಾಟ ಸಯ್ರುಸಕೂಡದು (Prv.). see Prv. s. ಬೆಳಕು.

**ಬಳಚು baḷacu. 1.** to cause to smear (a floor, etc. with cow-dung, My.).

**ಬಳಚು baḷacu. 2.** (ಬಳೆಚು). = ಬಳಾಚು. (to cause to go?), to cut off (Bh. 5, 3, 83; Rām. 3, 4, 27).

**ಬಳದು baḷadu.** = ಬಳಾದು. P. p. of ಬಳ್ 4. (My.).

**ಬಳಲ್ baḷal. 1.** = ಬಳಲು 1. to become weary, to be fatigued; to droop, to fade; to be cast down, to be distressed (ಎಱಲ್ Śmd. I; ಶ್ರಾನ್ತಿ Śmd. Dh.; ಸೇದೆ Śm. 107; see ಬಡಲುವಿಕೆ; Tu.; T. ವಞಕ್ಕೈ, weariness, etc.; *cf.* ಬಾಡು 1). P. p. ಬಳಲ್ದು (Śmd. 49). [ಮೃಗವ್ಯ ವ್ಯಾಪಾರದಿಂ ಬಳಲ್ದು ಮನದನ್ತ ಪರಿವ ಜಾತ್ಯಶ್ವಂಗಳನೇಱಿ ಬರೆವರೆ Pb. 5, 50 va.]. ಪುಷ್ಪಮೊನ್ದು ಬಳ ಲಲ್ ಭೃಂಗಕ್ಕೆ ಪೂವಿಲ್ಲವೇ? (Śś. 8). see Cpr. 5, 63; 7, 41; 8, 71; Bp. 42, 31; Rśv. 5, 39; 11, 7; J. 4, 35; 13, 5; 26, 4; 28, 5. 16; 29, 49; ಕಡು-.

**ಬಳಲ್ baḷal. 2.** = ಬಳಾಲ್. to become slack or loose; to swing, to dangle; to slip [ನನೆಯನೆ ಪೇಱು ಕೆನ್ದಳಿರೊಳೆಯ್ದು ಬಳಲ್ದೆಳವಾವು Ap. 1, 65]; (ಜೋಲ್ Śm. 107; T., M. ವಱುಕ್ಕು, to slide or slip; M. also ವಱುದು). ಬಳಲ್ದ ಉಡಿ (Cpr. 7, 117).

**ಬಳಲ್ baḷal. 3.** = ಬಳಲು 2. the state of being loose, etc. (ಜಂಗಳ, ಸೋರ್, ಸಡಿಲ್ಪುದು Śm. 49). — ಬಳಲ್ಗಿವಿ. -ಕಿವಿ. a flapping ear (J. 13, 60). — ಬಳಲ್ದುಱುಬು. -ತುಱುಬು. a loose bundle of hair (J. 18, 25). — ಬಳಲ್ಮುಡಿ. a loose knot or braid of hair [ಆಕೆಯ... ಪೂಮಾಲೆವೆರಸಿದ ಬಳಲ್ಮುಡಿಗಮಲಮ್ಬುವೆರಸಿದ ನೋ ಟಕ್ಕಂ Pb. 4, 17 va; Ap. 12, 12]; (Abh. P. 3, 67 va.; Śm. 118; Rśv. 7, 17).

**ಬಳಲಿಕೆ baḷalike.** = ಬಳಲ್ಕೆ. weariness, fatigue, distress (ದವಥು, ಪರಿತಾಪ Hlā., Mr. 385; ಅಟಕಟ Bhn. 66; Bp. 18, 12; 29, 13; 59, 15; Rām. 3, 2, 15; J. 5, 61; My.; T. ಪಡಲಿಗೈ). ಬಹಳ ಬಳಲಿಕೆ (ಪ್ರಗಾಢ Si. 417).

**ಬಳಲಿದು baḷalidu.** a wrong form of ಬಳಲ್ದು. P. p. of ಬಳಲ್ 1 (Rām. 2, 7, 3). see ಇದು 2.

**ಬಳಲಿಸು baḷalisu.** = ಬಳಲ್ಚು. (Rām. 3, 2, 27; J. 7, 60; 13, 19. 33. 55; My.).

**ಬಳಲು baḷalu. 1.** = ಬಳಲ್ 1. P. p. ಬಳಲಿ. (Bp. 24, 61; 47, 40; 57, 14; Rām. 3, 8, 69; J. 7, 39; 10, 50; 15, 5; 18, 17; My.). ಬಳ ಲೋಣವು (ಕ್ಲಮಥ, ಕ್ಲಮ, ಬಳಲುವಿಕೆ Si. 390). ಕಣ್ದಿ ಬಳಲುವ ಹಾಗೆ ಮಾಡುವ ರೋಗಾದಿಗಳು (ಸ್ಪರ್ಶ, ಸ್ಪೃಷ್ಟ್ಯ, ಉಪತಪ್ತ್ಯ 392).

**ಬಳಲು baḷalu. 2.** = ಬಳಲ್ 3. the state of being loose. — ಬಳಲುಗೊರಳ್. -ಕೊರಳ್. a slack neck (Rām. 3, 3, 18).

**ಬಳಲ್ಕೆ baḷalke.** = ಬಳಲಿಕೆ. weariness, etc. (ಸೇದೆ Ct. I, 50; II, 37; Kk. 46; Śm. 59; Bp. 12, 47; J. 4, 48; 32, 28).

**ಬಳಲ್ಚು baḷalcu.** = ಬಳಲಿಸು. to deprive of motion or activity: to exhaust, to weary (ನಿಶ್ಚೇಷ್ಟೆ Śmd. Dh.; Śsv. 5, 3).

**ಬಳಸು baḷasu.** = ಬಳಾಸು 1. (to cause to go); to use; to spend, as time, etc. (My.; Bp. 16, 19; 20, 8; Bh. 1, 1, 9; 1, 10, 1; Rām. 3, 2, 18; Si. 36; B. 5, 92. 103; T. ವಱಂಗು, to walk; to pass current; to be in use; to conduct; ವಯಂಗು, to conduct, carry on; ವಯಱ, ವಯನ, way, manner; Te. ವರಸೆ, way, mode; usage; see ಪಱಕಿಸು; *cf.* also Tbh. ವಯಿನ and ವಾಡಿಕೆ). ಬಳಸ ದಿರ್ಪುದು (ಮಾಸಲ್ Bhn. 9). see Prv. s. ಬೆಳಸು 1.

**ಬಳಿ baḷi. 1.** = ಬದಿ 2, ಬಲಿ 2. (going; passing); a way, a road (ಮಾರ್ಗ Śmd. Dh.; ಬಟ್ಟೆ I; ಪಥ Śm. 115; My.; T. ವದಿ, ವರಿ, ವಱು; M. ವಱು). 2, a place, a spot (ಎಡೆ, ಠಾವು Nn. 128; Cpr. 6, 48; T.). ಪೊಯ್ದ ಬಳಿ (ಬಾಸಱ Śmd. I). ನಗ ಕುಲದ ಬಳಿಗಳು (Rām. 3, 2, 16). see ಎಸಳ್ಬಳಿ. 3, vicinity, nearness; company (ಸನಿಹ Śm. 115; ಸಮೀಪ, ನಿಕಟ, ಸನೀಡ, ಸದೇಶ, ಸವಿಧ, ಸಮರ್ಯಾದ, etc., ಹತ್ತಿರ Si. 371; My.). [ಪಿರಿದು ಸಮುಚ್ಚಯದಾ ಬಳಿ ವಿಕಲ್ಪದಾ ತೆಱದೊಳೆ ದೋಷಮುಮುನನ್ತೆ ಗುಣಮು ಮಂ Kr. 1, 137; Pb. 2, 10; Ap. 14, 69]. ಕಱು ತಾಯ ಬಳಿಯನುಱು ಯದ ತೆಱದಿನ್ದಂ (Śmd. 194). ಈತನಂ ಕಳುಹಿದೆವು ನಿನ್ನ ಬಳಿಗೆ (J. 30, 25). see Śmd. 5; Bh. 1, 8, 94; 1, 10, 23; J. 10, 43; 13, 53; Si. 90. 201. 4, may, mode, order: regularity, proper course, right behaviour (T., M. ವಱು; see ಗಟಿವಱು). 5, race, lineage (ವಂಶ Śmd. Dh. & I; Śm. 115; M. ವಱುಬಾಡು; Tu. ಬರಿ). 6, passing on: following: later or succeeding time; after, afterwards; further, and (ಮತ್ತೆ Śmd. I; ಬಲ್ಲೆ, ಮತ್ತೆ 398; T. ವಱು). ಬಳಿಯೊಳ್ (Cpr. 3, 39). 7, the place of the throat next to the artery called pingale (ಪಿಂಗಲೆಯ ಬಳಿಗೊರಲ್ Śmd. I). — ಬಳಿ ಕೊಳ್. to take the proper way or order: to place together in regular order (ಕ್ರಮ ಸನ್ನಾಸ Śmd. Dh.). — ಬಳಿಗೆಲಸ. -ಕೆಲಸ. work in the vicinity

or about (a person), waiting upon, attendance, service (Bp. 16, 13; 18, 12; 25, 8; 26, 20. 62). — ಬಳಿಗೆಲಸಿ. -ಕೆಲಸಿ. an attendant, a servant (Bp. 47, 36). — ಬಳಿಗೊರಲ್. -ಕೊರಲ್. the place of the throat next to—(see s. ಬಳಿ No. 7). — ಬಳಿಗೊಳ್. -ಕೊಳ್. to occupy a place, to plant oneself (Rśv. 5, 42). — ಬಳಿಗೋಲು. -ಕೋಲು. another arrow (Bh. 8, 10, 39). — ಬಳಿದಪ್ಪು. -ತಪ್ಪು. the road to be lost: to lose one's road (Cpr. 5, 64 va.). — ಬಳಿಯಂ. -ಅಂ. a man of good manners, a submissive man (ವಿಧೇಯಂ Śmd. I). see another ಬಳಿಯಂ s. ಬಳಿಯ. — ಬಳಿವಟಿ. -ಬಟಿ 2. 1. = ಬಳಿವಲಿ, ಬಳಿವಟ್ಟಿ, ಬಳಿವಲಿ, ಬಳಿವಟಿ. a company-gift: a gift that does not come alone, but is followed by another, two and more presents (ಕೊಟ್ಟ ವಸ್ತುವಿನ ಬಳಿಯೊಳ್ ಕುಡುವುದು Śmd. I); especially the present to one's daughter, and other presents besides, given at the time of marriage [ಅತನ ಬಳಿವಟಿಗೊಟ್ಟ ಮದಕರಿ ಕರೇಣು ಜಾತ್ಯಶ್ವ ಶಶಿ ತಾರ ಹಾರ ವಸ್ತುಗಳಂ ಕೆಯ್ಕೊಣ್ಡು Pb. 4, 4 va.; Vr. 108, 22]; (ಅಟ್ಟುಮ್ಬರಿ Kk 53; ಅಟ್ಟುಮ್ಬಳಿ Śm. 61). — ಬಳಿವಟಿ. -ಬಟಿ. 2. different ways or roads [ಈ ಪೊಲ್ತು ತುರಿಪದಿನ್ದಕ್ಕಿಯಿನ್ದೆತ್ತ ಪೋದಪ್ಪೆಲೆನ್ದು ಬಳಿವಟಿಯನೆ ನೋಡುತ್ತುಂ Vr. 16, 13]; (Rśv. 11, 166). — ಬಳಿವಿಡಿ. -ಪಿಡಿ. to take a way; to join (v. i.); to follow; to observe a regular order; to conduct in accordance with, to comply with (ಬೆಮ್ಬಳಿವಿಡಿ Śmd. 195 Cm.). ಬಳಿವಿಡಿದು ಬಹವನು (ಅನುಪ್ಲವ, ಸಹಾಯ, ಅನುಚರ, etc.); ಬಳಿವಿಡಿದುದು (ಅನ್ವಂಚ್, ಅನುಗ, etc.); ಬಳಿವಿಡಿದುದು (ಅನುರೋಧ, ಪ್ರಸಾದ Nr.). ಬಳಿವಿಡಿದು ವರುಪಕ್ಕೆ ಈವುದು (ಸಮಾಂಸಮೀನಾ Mr. 181). see Śmd. 298; Bp. 28, 28; 38, 18; 46, 21; 53, 64; 57, 46; Śśv. 4, 24 va.; J. 3, 3; 5, 31; 20, 34; 30, 15. — ಬಳಿ ಸಲ್. to go after, to follow [ಉಳಿವರುಮನುಜಯಲೀಯದೆ ಬಳಿಸನ್ದಾಗಳ್ Pb. 11, 9 va ]; (ಅನುಗಮನ Śmd. Dh.; ಪಿನ್ದಯ್ದಿ ಪೋಪುದು Ct. I, 85; Śmd. 281, o. r. ತಳಿ–; Abh. P. 13, 35; Bp. 4, 61; 56, 43; Bh. 1, 8, 45; Śśv. 2, 42 va.; J. 28, 52). — ಬಳಿ ಸಲಿಸು. to place behind (Rām. 6, 11, 2); to put into the shade (6, 30, 9); to come one after the other (6, 30, 13). — ಬಳಿ ಸಲುಹ. following (ಅನುಪದ, ಅನ್ವಂಚ್, ಅನ್ವಕ್ಷ Hlā.). — ಬಳಿ ಸಳ್ತು. a large, etc. road (ಪೆರ್ವಾರಿ Ct. I, 35). — ಬಳಿ ಸಾರ್. to approach (Śśv 2, 47). — ಬಳಿ ಸೂರ್ಯಶಯಾನಕ. a chameleon (ಗೋಸುಮ್ಬೆ, Mr. 164).

**ಬಳಿ baḷi. 2.** = ಬರಿ 2, ಬಲಿ 3, ಬಳಾಗೆ, ಬಟ್ಟ. a gift, a present. (T. ಅಳಿ, to bestow, grant: ವಳಂಗು, to give; to distribute; M. ವಿಳಿಚ್ಚು, to grant a favour; T. ವಳಿ, offerings of rice, etc.; ವಡಿತಲ್, giving in possession; cf. ಬಾಗಿನ; ವರಿ 3). see ಉಮ್ಬಳಿ, ಬಳಿವಟಿ, ಬಳಿವಟಿ.

**ಬಳಿ baḷi. 3.** a man who calls or invites (ಆಹ್ವಾನಪುರುಷ Śmd. Dh.; ಕರೆವಂ I; T. ಅಟ್ಕೈ, to call, summon; T., M. ವಿಳಿ, to call, invite; — a call, cry, summons; cf. ಬಗುರ್, T. ವಳಂಗು, to speak; Te. ಪಿಲುಚು, to call, invite; ಪಿಲುಪು, a call, cry, an invitation; cf. ಬಿನ್ನಣ). — ಬಳಿಯಟ್ಟು. -ಅಟ್ಟು. to send one that calls or invites to come (Cpr. 7, 48; Abh. P. 6, 42 va ; 12, 40 va.; 16, 4 va.). [— ಬಳಿಯನಟ್ಟು. -ಅನ್. -ಅಟ್ಟು. = ಬಳಿಯಟ್ಟು. ದ್ರೌಪದಿಗೆ ಬಳಿಯನಟ್ಟಿ ಬರಿಸಿ Pb. 8, 96 va.; Ap. 3, 46 va.].

**ಬಳಿ baḷi. 4.** = ಜೋಳಿ. to sweep together, as dust (My.); — to wipe off or aside with the hand (Rām. 3, 6, 57; My.); — to scrape together with the hand (Bh. 2, 13, 50). 2, to put on or apply to, as lime (white-wash), mud, etc. to a wall, cow-dung to the floor of a house, etc., an ointment to the body (My.); — to besmear, as the floor of a house, etc. with cow-dung; to anoint (ಸಮ್ಮಾರ್ಜನ Śmd. Dh., Śm. 115; ಲೇಪಿಸು Śmd. I; Rśv. 11, 67; My.; T. ವಳಿ; M. ವಡಿ; cf. ಬಾಚು 2). P. ps. ಬಳಿದು, ಬಳಿದು. ಬಳಿದ ಎಣ್ಣೆ (the oil applied to the body) ಬಚ್ಚಲಿಗೆ (Prvs.). — ಬಳಿದು ಕೊಳ್ಳು. to smear, as paint on the face (My.). ಬಳಿದು ಕೊಣ್ಡು ಹೋಗು, to rob (My.).

**ಬಳಿಕೆ baḷika.** ಬಳಿಕಂ. = ಬಳಿ 1 No. 6, ಬಳಿಕೆ No. 2, ಬಳಿಕ್ಕ, ಬಳಿಕ್ಕೆ, ಬಳಿಯ. after, afterwards; further, and [ಒಡಲೊಳೆ ಜೀವಮಿರ್ದು ಗಡ ಸಂಚಿಸುತಿರ್ಪುದು ಪುಣ್ಯ ಪಾಪಮಂ ಗಡ ಬಳಿಕತ್ತ ಬೇಱೆ ಪೆಱತೊಡಲೊಳ್ಗಡ Ap. 2, 8]; (ಪಶ್ಚಾದರ್ಥ Śmd. I; 396; ಪುತ್ತ್ರಮ್ಬರ್ಥ 397 Cm.; ಪಶ್ಚಾತ್, ಚರಮ Hlā., Mr. 434; My.; Te. ವೆನಕ, ವೆನುಕ; Cpr. 2, 41; Bp. 37, 15; 49, 40; Jmt. 17; Bh. 1, 8, 88; 1, 10, 36; Śm. 27. 39; J. 2, 4. 47; Si. 301. 398). — ಬಳಿಕಲೆ. even afterwards (Bp. 3, 84).

**ಬಳಿಕೆ baḷike. 1.** = ಬಳಕೆ. use, etc. (My.; Si. 15. 102. 320; B. 4, 53. 141; 5, 60. 226). 2, = ಬಳಿಕ, etc. (Śmd. I; 396; Śm. 37. 58. 118). — ಬಳಿಕೆಗೊಳ್. -ಕೊಳ್. to obtain use, to be used (My.; Si. 19).

***ಬಳಿಕೆ baḷike. 2.** = ಬಳಿಕ. ವಿಜಯನನೆ ಪಲಂ ಮುಂ ಕಣ್ಡು ಬಳಿಕೆ ನೃಪನಂ ಕಣ್ಡಂ Pb. 9, 11.

**ಬಳಿಕ್ಕ baḷikka.** ಬಳಿಕ್ಕಂ = ಬಳಿಕ, etc. [ಮೊದಲಪವಂ ಸ್ಯೂನಾಕ್ಷರಮದಱಿನ್ದ ಬಳಿಕ್ಕಮರ್ಥಮಧಿಕಾಕ್ಷರಂ Kr. 1, 93; Pb. 3, 81]; (Śmd. I; 396; Bp. 13, 6; 42, 30; 49, 13).

**ಬಳಿಕ್ಕೆ baḷikke.** = ಬಳಿಕ, etc. [ಮೋಣವರಂ ಬಳಿಕ್ಕೆ ತಾಮುಳಿವರೆ Ap. 3, 53]; (Śmd. I; 396).

**ಬಳಿಗೆ baḷige.** = ಬಳಿ 2, etc. gift, present. see ಉಮ್ಬಳಿಗೆ.

**ಬಳಿಚು baḷicu. (ಬಳಿಚು).** = ಬಳಿಚು 2. to cut off. (J. 4, 44).

**ಬಳಿಯ baḷiya.** ಬಳಿಯಂ. = ಬಳಿಕ, etc. [ಅಲ್ಲಿಂ ಬಳಿಯಂ ತಲೆಯಂ ಕಿರಿದುಸಿ Kr. 3, 145; Pb. 4, 48 va.; Ap. 2, 49 va.]; (Śmd. I; 396; Cpr. 5, 44 va.; Rśv. 13, 99). ಅಲ್ಲಿಂ ಬಳಿಯಂ (Lilv. 3, 3 va.). see another ಬಳಿಯಂ s. ಬಳಿ 1.

**ಬಳಿಲ್ baḷil.** = ಬಟಿಲ್ 2. to become slack or loose. (ಜಗುಳ್ Śmd. I).

**ಬಳಿಲ್ಚು baḷilcu.** to cause to slip, drop or fall down (ಅಧಃಸ್ರಂಸನ Śmd. Dh.).

**ಬಳಿಸು baḷisu. 1.** = ಬಳಸು. to use, etc. (My.; B. 4, 141. 194).

**ಬಳಿಸು baḷisu. 2.** = ಜೋಳಿಸು. to cause to sweep together, etc. (My.).

**ಬಳು baḷu. 1.** = ಬಳಿ 1, etc. — ಬಳುವಲಿ. -ಬಲಿ. = ಬಳುವಟಿ. (Nr. a; J. 31, 19). — ಬಳುವಟಿ. -ಬಟಿ. = ಬಳಿವಟಿ 1. (Bh. 8, 27, 22; J. 27, 54). ಮದುವೆ ಮೊದಲಾದವಱಲ್ಲಿ ಕೊಡುವ ಬಳುವಟಿ ಪೆಸರಾದುದು ಆನೊನ್ದು, ಅದು ವಾಯ ಎನ್ದೂ ಪರಣ ಎನ್ದೂ ಎನಿಸುಗು (Nr. b).

**ಬಳು baḷu. 2.** = ಬಟಿ 2. P. p. of ಬಳಿ 4, in ಬಳು ಕೊಳ್ಳು (My.).

**ಬಳು baḷu. 3.** putting on or applying to. — ಬಳುಗಾರೆ. mortar that is applied to a wall, etc. for smoothing and finishing (My.).

***ಬಳ್ಚು baḷcu.** = ಬಳಚು 2. to cut off, etc. ಶಿವಸುಖಮನೆಯ್ದಿಸುವ ಸಚ್ಚಾರಿತ್ರದಿಂ ಬಳ್ಚಿದೆನೆನ್ದು ತನ್ನಂ ತಾಂ ನಿನ್ದಿಸುತ್ತಂ Vr. 28, 16.

***ಬಳ್ದು baḷdu.** to get fatigued, to become weary. (*cf.* ಬಳಲ್ 1). ತಾಯ್ ಮನದೊಳ್ ಬಳ್ದುದೊಳಾಗಿ ನಿನಗೆ ತನ್ದೆಯ ಪ್ರಾತನೆನಗಂ ತನ್ದೆಯೆನ್ದು ಪೇಟ್ದೊಡೆ Vr. 116, 24.

**ಬಳ್ದುಂಕು baḷduṅku.** = ಬದುಕು 1, etc. to live, etc. (ಜೀವಿಸು Śmd. I); to remain alive, to be saved (ಬಿಡಲ್ ಪಡು I). ಪುಲಿಯ ಬಾಯಿಂ ಬಳ್ದುಂಕಿದಂ (I).

**ಬಳ್ಳಿ baḷḷi.** = ಬಳು 2, etc. a gift, present. see ಬಳುವಳಿ.

**ಬಾ bā. 1.** imperative singular of ಬರ್ 1: come! (C.; Bh. 1, 8, 61; 2, 13, 8, 9; Tu. ಬಲಾ; T., M. ವಾ). — ಬಾ ಬಾ. rep. (Bp. 24, 82; 27, 61).

**ಬಾ bā. 2.** = ಬಾಯು. to swell, to tumefy (ಶೋಭ Śmd. Dh.; ಬೀಗು Bhn. 21). P. ps. ಬಾದು (Śmd. 265 Cm.; 279 Cm.), ಬಾತು (Śmd. 287 Cm.). ಬಾದುಣ್ಜಸ್ತ್ರ, ಹತ್ತನೆಯ ತಲೆಯುಮಂ ನೇರ್ದಾಗಲ್ (Śmd. 288).

**ಬಾ bā.** = ಬಾವ 1. a sister's husband. — ಬಾಮಯ್ಯಳು. = ಬಾವ ಮಯ್ದುನ್ನರು. (My.). — ಬಾ ಮಯ್ದು. = ಬಾವ ಮಯ್ದು. (My.).

**ಬಾಂವಿ bāmvi.** = ಬಾವಿ. a well. (ವಾಪಿ Cb.).

**ಬಾಕ bāka.** Tbh. of ಭಾಕ್ಷ. habitually eating, etc. see *e. g.* ಹೊಟ್ಟೆ-. feminine ಬಾಕಳು, see *e. g.* ಹೊಟ್ಟೆ-.

**ಬಾಕತನ bākatana.** gluttony. see *e. g.* ಹೊಟ್ಟೆ-.

**ಬಾಕಲ್ bākal. ಬಾಕಲು.** = ಬಾಗಿಲ್, etc. a door, etc. (ದ್ವಾರ, ಪ್ರತೀಹಾರ Si. 111; My.). see Si. 111. 112; B. 5, 27.

**ಬಾಕಲ bākala.** = ಬಾಕಲ್, etc. (B. 5, 126. 140).

**ಬಾಕಲು bākalu.** = ಹಕ್ಕಲು 1. gleanings. — ಬಾಕಲಾಯು. -ಆಯು. = ಹಕ್ಕಲಾಯು. (My.).

**ಬಾಕಿ bāki. 1.** (fr. ಬಾಕ). a female eater or devourer. see ಹೊನ್ನು-.

**ಬಾಕಿ bāki. 2.** remainder; balance; balance outstanding (of a sum or an account); debt; remaining (My.; Mhr., H., Br.; Cb. 143). ತೆತ್ತಷ್ಟೂ ಬಾಕಿ ಬಿದ್ದರೆ ಮತ್ತೇನು ಕೊಟ್ಟಾನು? — ಅಸಲು ಬಾಕಿ ಯಾದರೂ ಬಡ್ಡಿ ಕೆಯ್ಗೆ ಬನ್ತು (Prvs.). — ಬಾಕಿ ಸಾಕಿ. balance outstanding (My.; Mhr. ಬಾಕೀ ಸಾಕೀ).

**ಬಾಕಿದಾರ bāki-dāra.** a man from whom a balance is due, one who is in arrears.

**ಬಾಕು bāku. 1.** a bend, a curve (Mhr., H. ಬಾಕ, ಬಾಂಕ, ವಾಕ, ವಾಂಕ). ಹುಬ್ಬಿನ ಬಾಕು (ಭ್ರೂಲತೆ Cb.).

**ಬಾಕು bāku. 2.** = ಬಾಗು. a dagger (My.; T. ವಾಂಗು, M. ವಾಜ್ಞು, ವಂಗಿ; Br., H.).

**ಬಾಕುಳ bākuḷa.** = ಬಾಕುಳಿ. (Bp. 40, 58).

**ಬಾಕುಳಿ bākuḷi.** excessive desire (ಪಸ, ಮೊಗಸು, ಇಚ್ಛೆ Ss.; ಅತ್ಯಾಸೆ Kk. 67; ಪಿರಿದಾಸೆ Śm. 51; *cf.* ಬಯಸು). 2, an inordinately desirous, covetous person (Bh. 3, 7, 87).

**ಬಾಗ್ bāg. ಬಾಗು.** a garden (Mhr., H. ಬಾಗ; see ಲಾಲ್-).

**ಬಾಗ bāga. 1.** (Tbh. of ಭಾಗ್ಯ). one of the qualities of sātvati (Kāvy. IV, 2, 60; Te. ಬಾಗು). — ಬಾಗವಾಡಿ. N. of a place (Bp. 2, 45; 5; 49; see ಇಂಗಳೇಶ್ವರ-).

**ಬಾಗ bāga. 2.** Tbh. of ಭಾಗ. (My.). see ಕಡಿವಾಗ.

**ಬಾಗ bāga. 3.** = ಬಾಗ್. a garden. see ಬಾಗವಾನ.

**ಬಾಗಲ bāgala.** = ಬಾಗಲು, etc. a door, etc. see ಅಗಸೆ-. — ಬಾಗಲವಾಡ. -ವಾಡ. = ಬಾಗಿಲ್ವಾಡ. a door-frame (My.).

**ಬಾಗಲು bāgalu.** = ಬಾಗಿಲ್, etc. (My.). ಊರೆಲ್ಲ ಸೂಚೆ ಆದ ಮೇಲೆ ಬಾಗಲು ಹಾಕಿದರು. — ಬಾಗಲು ಮುಚ್ಚುವುದು ಹೊಗುವವನಿಗೆ ಬೀಗದ ಕೆಯ್ ಯಾಕೆ? (Prvs.).

**ಬಾಗವಾನ bāga3-vāna.** a gardener; one of a caste that buy and sell vegetables and flowers (S. Mhr.; Mhr., H.).

**ಬಾಗಾಯತಿ bāgāyati.** relating to garden-land (Mhr., H. ಬಾಗಾಇತೀ); a garden (My.).

**ಬಾಗಾಯತು bāgāyatu.** garden-land, a garden (My.; Mhr., H. ಬಾಗಾಈತ).

**ಬಾಗಿ bāgi.** = ಬಾಗೆ. N. of a tree (ಶಿವಾಂಗಿ Mr. 127, o. r. in two MSS. ಬಾಗೆ; Bp. 45, 36); the tree Calosanthes indica Blum. (St. & Pl.; Oroxylum indicum Vent., Z.).

**ಬಾಗಿ bāgi. 1.** Tbh. of ಭಾಗಿ 1. an owner; a master, a lord (Abh. P. 5, 3).

**ಬಾಗಿ bāgi. 2.** (Tbh. of ಭಾಗ್ಯ). = ಭಾಗಿ 3. a lucky female; N. (My.). — ಬಾಗಮ್ಮ. -ಅಮ್ಮ. N. (My.).

**ಬಾಗಿನ bāgina.** = ಬಾಯಿನ. Tbh. of ವಾಯನ. a present, a gift (My.; T. ವಾಗ್ಯ; *cf.* ಬಳು 2). [a present made by a lady whose husband is living. ಮುತ್ತೆಯ ಕೈಯ ಬಾಗಿನವ ಕೊಡ್ಡಿದೇನಯ್ಯಾ? ಗಣ್ಡನುಳ್ಳ ಗರತಿಯರು ಮೆಚ್ಚರು Cv. 468].

**ಬಾಗಿಲ್ bāgil. ಬಾಗಿಲು.** = ಬಾಕಲ್, ಬಾಕಲ, ಬಾಗಲ, ಬಾಗಲು, ಬಾಗಿಲ. a door, a gate, a door-way (ದ್ವಾರ್, ದ್ವಾರ, ಬಲಜ Hlā.; ದ್ವಾರ್, ದ್ವಾರ, ಪ್ರತೀಹಾರ Nr., Si. 111; ದ್ವಾರ, ಪ್ರತೀಹಾರ Nn. 100; Cpr. 2, 93 va.; 3, 97; 7, 79 va.; Bp. 55, 10; B. 2, 45. 52; 4, 57; C. Bp. 5, 48. 51. 52; Bh. 1, 8, 70; J. 3, 9; 5, 57; 17, 6. 21; C.; T. ವಾಜಿಲ್, ವಾಯಲ್, ವಾಯಿಲ್; M. ವಾದಿಲ್; Te. ವಾಕಿಲಿ; Tu. ಬಾಕಿಲ್). [ಸಿನ್ಧುರಾಜನಂ ಮಱುಗಿಸೆ ಬಾಗಿಲೊಳ್ ಮುಸುಱುನಿನ್ನ ಘಟಾವಳಿಯಂ ತೆರಳ್ಚಿ Pb. 11, 93; Ap. 1, 66]. ಬಾಗಿಲ ಹೊಱಗಣ ತೋರಣ ತೋರಣ, ಬಹಿದ್ವಾರ; ಹೊಱಗಣ ಬಾಗಿಲೆನ್ದೂ, ಎಮ್ಬರು (Nr.). ಒಳಗಣ ಬಾಗಿಲು (ಪ್ರಚ್ಛನ್ನ, ಅನ್ತರ್ದ್ವಾರ); ಪಟ್ಟಣದ ಬಾಗಿಲು (ವಲಜ); ಮನೆಯ ಕೆಲದ ಬಾಗಿಲು (ಪಕ್ಷದ್ವಾರ Nr.). ಬಾಗಿಲ ಹೊಸ್ತಲು (ದೇಹಲಿ); ಬಾಗಿಲ ಕೆಳಗಡೆ ಹೊಸ್ತಲ ಬಱೀ ಅಡ್ಡವಾಗಿ ತುಱುಯುವದಕ್ಕೆ ಹಾಕಲ್ ಪಟ್ಟಿರುವ ಮಟ್ಟುಹಲಿಗೆ (ಶಿಲೆ Si. 110); ಬಾಗಿಲು ಮುಚ್ಚಿ ತೆಗೆಯುವ ಕದ (ಕವಾಟ, ಅರರ 112). ಬಾಗಿಲ ಕಾವವನು (ದ್ವಾರಪಾಲ, ಪ್ರತೀಹಾರ Nn. 100). ಬಾಗಿಲು ಕಾಯುವ ಜವಾನ (ದ್ವಾರಪಾಲ, etc. Si. 258). ಬಾಗಿಲಲ್ಲಿ ಕಾಯಿದುಕೊಣ್ಡಿರುವವನು (ಕ್ಷತ್ತ್ರ, ದ್ವಾಃಸ್ಥ 422). — ಬಾಗಿಲವ. -ಅವ. a door-keeper, a warder (ದವ್ವಾರಿಕ, ದ್ವಾಸ್ಥ Mr. 266; Bp. 16, 13; 35, 47; My.). — ಬಾಗಿಲುವಾಡ. -ವಾಡ. a tower, or an upstair house, over the gate of a place (ಗೋಪುರ, ಪುರದ್ವಾರ Hlā.). — ಬಾಗಿಲ್ವಾಡ. = ಬಾಗಿಲುವಾಡ. (Abh. P. 4, 81 va.). — ಬಾಗಿಲ್ವಾಡ. -ವಾಡ. = ಬಾಗಲವಾಡ. [ಸಾಕೇತ ನಗರಮಂ ಬಳಸಿದ ಕನಕ ಪ್ರಾಕಾರದ ಬಾಗಿಲ್ವಾಡಂಗಳೊಳಂ Ap. 16, 37 va.]; (Rśv. 8, 5 va.; 10, 31 va.; Śsv. 1, 61).

**ಬಾಗಿಲ bāgila.** = ಬಾಗಿಲ್, etc. a door, etc. (Bp. 31, 16; B. 4, 217; see ಅಗಸೆ-). — ಬಾಗಿಲವಾಡ. (= ಬಾಗಿಲುವಾಡ). N. of a place (Bp. 12, 8).

**ಬಾಗಿಸು bāgisu.** to bend (v. t.; My.; Bp. 9, 31; 32, 27; J. 8, 22; see ತಲೆವಾಗಿಸು). 2, to cause to bend, to have bent (by another, My.).

**ಬಾಗು bāgu. 1.** to bend (v. i.), to bow, to incline, to stoop (ನಮ್ರತೆ, Śmd. Dh.; ಬಗ್ಗು Śm. 84; My.; T. ವಾಂಗು, M. ವಾಙ್ಙು). [ಅವುದು ಬಾಗಿದುದುಮಧಿಕಂ ಬಸನಂ Kr. 2, 150; Pb. 3, 34; Ap. 7, 38]. ಬಾಗಿದುದು (ಅವಾಗ್ರ, ಅವನತ, ಅನತ Nr.). ಅತಿ ಬಾಗಿದುದು (ಮಣಿ, ವಿನಮ್ರ Nn. 67); ಬಾಗದುದು (ಸ್ತಬ್ಧ, ಅನತ 76). 2, to bend (v. t., My.); (to pour off the water from boiled rice, etc. by inclining the vessel). ಶಿರವ ಬಾಗುವಂ (ಅಧೋಮುಖ Mr. 243). ಬಾಗಿದ ಗಂಜಿ (ಆಸ್ರಾವಕ, etc. Nr.; Si. 311). — ಬಾಗಿದರೂ ಬೀಗೋದು ತಪ್ಪಲಿಲ್ಲ (Prv.). see Bp. 24, 41; 27, 11; 43, 85; 46, 57; 57, 47. 59; 59, 22; 60, 28. 34; C. Bp. 11, 10; Rśv. 2, 49. 50; 13, 65; J. 3, 31; 19, 6; 28, 46; 31, 6; B. 4, 60; ತಲೆವಾಗು. — ಬಾಗೊತ್ತು.. ಬಾಗ ಒತ್ತು. to press down so as to bend (J. 14, 21).

**ಬಾಗು bāgu. 2.** bending, inclining: a bend, a curve; a bow, an obeisance (ಮೊಙ್ಗು, etc., ನಮಸ್ಕಾರ Ss.). see B. 4, 47; 5, 238; Bh. 2, 4, 10; Mr. s. ತ್ರಿಭಂಗಿ; ಕಾಗು ಬಾಗು. — ಬಾಗುವೆಙ್. -ಪೆಙ್. to begin to bend (v. i., Bp. 4, 29).

**ಬಾಗು bāgu.** = ಬಾಕು 2. a dagger. (Bp. 6, 9).

**ಬಾಗುರಿ bāguri.** = ಭಾಗುರಿ. N. of a ṛiṣi (J. 33, 39).

**ಬಾಗುವಠನ bāguvatana.** the state of being bent. ವಿಲಾಸದಿಂ ಬಾಗುವಠನಂ (ವಿಲಾಸಾವನಮ್ರಂ Śmd. Dh. ad ನಿಕ್ಕುಳಿಸು).

**ಬಾಗುಹ bāguha.** bending. see ತಲೆವಾಗುಹ.

**ಬಾಗುಳ್ bāguḷ.** = ಬಾಗುಳ. Tbh. of ವ್ಯಾಕುಲ. perplexed, etc. (Śmd. II; Kk. 93; cf. ಬಾವಳಿಸು).

**ಬಾಗುಳ bāguḷa.** = ಬಾಗುಳ್. (ವ್ಯಾಕುಲ Śm. 48; ಚಿತ್ರ Ct. I, 71; V. 3, 9).

**ಬಾಗೆ bāge.** = ಬಾಗಿ, q. v. 2, the tree Acacia (or Mimosa) sceressa Roxb. (Albizzia lebbeck Benth., ಶಿರೀಷ, ಕಪೀತನ, ಭಣ್ಡೀಲ, ಭಣ್ಡೀರ Si. 136; My.; ಸಿರಿಸ Mr. 119; T. ವಾಗೈ, Mimosa flexuosa Rottl.; M. ವಾಗೆ, Acacia odoratissima).

**ಬಾಗೆ bāge.** Tbh. of ಭಾಗ. a fraction, etc. (Bp. 56, 35; Hlā. s. ಮೇಗು).

**ಬಾಂ- bāṅ.** ಬಾಙ್-. = ಬಾನ್ 3, etc. the sky. — ಬಾಂಗಡಲ್. -ಕಡಲ್. the sky-sea: the celestial Ganges (Rśv. 10, 82; Śśv. 3, 3). — ಬಾಂಗೆಱೆ. -ಕೆಱೆ. the sky-tank (Rśv. 12, 12; V. 3, 14). — ಬಾಂಗೆಸೆವ ಪಾವು. -ಎಸೆವ-. Rāhu (Kk. 11b).

**ಬಾಂಕಿ bāṅki.** a kind of bugle (My.; Mhr., H.).

**ಬಾಂಗಿ bāṅgi.** = ಬಂಗಿ 3. a pole with a sling attached to each end, carried across the shoulder and bearing packages in the slings; the packages conveyed: the bangy post or mail (My.; Mhr., H. ಬಂಗೀ, ಬಹಂಗೀ).

**ಬಾಚ bāca.** = ಬಾಚಿ 1. N. — ಬಾಚಪಡಿಹಾಱ. (Bp. 37, 3).

**ಬಾಚಣಿಗೆ bācaṇige.** a comb (My.; ಪ್ರಸಾಧನಿ, ಕಂಕತಿಕೆ Si. 231). ಬಾಚಣಿಗೆಯಿನ್ನ ಬಾಚಪವಳು ಬಾಚಿಯಿನ್ನ ಬಾಚ್ಯಾಳೇ? (Prv.). — ಬಾಚಣಿಗೆಹಲ್ಲು. the tooth of a comb (My.). Tu. ಬಾರ್ಪಣಿ.

**ಬಾಚಲ bācala.** — ಬಾಚಲದೇವಿ. N. (Bp. 59, 7).

**ಬಾಚಿ bāci.** (= ಬಿಳಸು 2). a bodice; a coat of mail (ಕಂಚುಕ, ವಾರಬಾಣ, ಚೋಲಕ, ಕುಪ್ಪಸ Mr. 343; cf. ಬಾಸಣೆ?).

**ಬಾಚಿ bāci. 1.** = ಬಾಚ. N. see ಪಡಿಹಾಱ-. — ಬಾಚಯ. -ಅಯ. N. (Bp. 53, 32; see ಬಿಬ್ಬಿ-). — ಬಾಚಯ್ಯ. -ಅಯ್ಯ. N. (Bp. 53, 8. 74. 75; 54, 83. 85; see ಬಿಬ್ಬಿ-, ಸೊಡ್ಡಳದೇವ-). — ಬಾಚರಸ. -ಅರಸ. N. (Bp. 37, 7. 14; 53 sum.; 53, 6. 16. 18. 23. 27; 53, 72; 54, 1; see ಸೊಡ್ಡಳದೇವ-, ಸೊಡ್ಡಳ-). — ಬಾಚರಸಯ್ಯ. -ಅಯ್ಯ. N. (Bp. 53, 30; see ಸೊಡ್ಡಳದೇವ-). — ಬಾಚಿದೇವಯ್ಯ. N. see ಸೊಡ್ಡಳ-. — ಬಾಚಿರಾಜ. N. (Bp. 53, 29; 54, 82; see ಸೊಡ್ಡಳ-).

**ಬಾಚಿ bāci. 2.** (Tbh. of ವಾಶಿ, ವಾಸಿ 5). an adze (ದಙ್ಢ Mr. 383, My.; Bp. 24, 81; ವೃಕ್ಷಭೇದಿ G.; T. ವಾಚ್ಚಿ, ವಾಢ್ಚಿ, ವಾಙ್ಚು; M. ವಾಚ್ಚಿ; Te. ಬಾಡಿತೆ, ಬಾಡಿಸೆ; Te. ವಾಡಿ, ವಾಡಿಮ, ವಾಲಾಮ, sharpness of weapons and instruments, cf. ಬಸಿ 2 & 3). see Prvs. s. ಕಾವು 2, ಬಾಚಣಿಗೆ. [Tu. ಬಾಚಿ].

**ಬಾಚಿಗ bāciga.** = ಬಾಸಿಗ 2. a speaker, etc. see ಎಗಚಿಗ-, and My. s. ಭಾಸ್ಕರ.

**ಬಾಚಿಸು bācisu. 1.** to cause to comb (My.).

**ಬಾಚಿಸು bācisu. 2.** to cause to gather up, etc. (My.).

***ಬಾಚಿಸು bācisu.** = ವಾಚಿಸು. ವಾಚಕನೋಲೆಯರ್ಥಮನಱಿಯದೆ ವಿಪರೀತಮಾಗಿನ್ತೆನ್ದು ಬಾಚಿಸಿದನ್ Vr. 75, 17.

**ಬಾಚು bācu. 1.** to comb (Bp. 47, 20; My.; ಹಿಕ್ಕು G.; Tu. ಬಾರ್, ಬರ್ಚು; T. ವಾರು, M. ವಾರು, ವಾಱು, ವಾಳು, to cut lengthwise; to trim a palm leaf to write upon, see ಬಾರ್ 2; to put the hair in order by a comb, to comb; T., M. ವಗಿರ್, to cut in longitudinal little pieces, to divide, slice; to part or disentangle, as the hair, see ಬಯ್ 1). see Prv. s. ಬಾಚಣಿಗೆ.

**ಬಾಚು bācu. 2.** (= ಬಾರ್ಚು). to scrape together with the hand, etc. and gather up, as sweepings, etc., to make a heap of and take away (My.; T., M., Te. ವಾರು; cf. ಬಱ 4); to take away and rob everything, to spoliate (My.; Bp. 31, 7; Dp. 55, 3).

**ಬಾಜನೆ bājane.** Tbh. of ವಾದನೆ. recitation, etc. (Śmd. 338; Kk. 51). — ಬಾಜನೆಗಬ್ಬ. -ಕಬ್ಬ. a kind of poetical composition (Kāvy. V, 965).

**ಬಾಜಾ bājā.** = ಬಾಜೆ. Tbh. of ವಾದ್ಯ. playing upon musical instruments, instrumental music (My.; Mhr., H.); a musical instrument (see s. ಪಂಚಮಹಾವಾದ್ಯ). — ಬಾಜಾಬಜನ್ತರಿ. music played upon all sorts of instruments (My.).

**ಬಾಜಾರ bājāra.** = ಬಜಾರ, etc. a market, etc. (My.; Dp. 169, 3).

**ಬಾಜಾರಿ bājāri.** = ಬಜಾರಿ. disreputable, etc. (My.).

**ಬಾಜಾರು bājāru.** = ಬಾಜಾರ, etc. (My.).

**ಬಾಜಿಬನ್ದು bāji-bandu.** = ಬಾಜುಬನ್ದ. a bracelet worn on the upper arm. (My.; Br.).

**ಬಾಜಿಸು bājisu.** = ಬಾಜಿಸು. Tbh. of ವಾದಿಸು. to sound, to sound or play a musical instrument, to strike a musical instrument, to strike or knock so as to produce a sound (ನುಡಿಸು Ct. II, 74; Abh. P. 4, 31; V. 9, 21 va.; Te. ವಾಯಿಂಚು). [ಬದ್ದವಣಮಂ ಬಾಜಿಸಿ ಮಂಗಳಮಂ ಪಾಡಿಸಿ Pb. 1, 133va.]; (Cpr. 9, 56va.). ವೀಣೆಯಂ ಬಾಜಿಸುತೆ (Bp. 1, 53). ಬಾಜಿಸುವ ಕುಡುಹು (ವಾದನದಣ್ಡ Śmd. 46; ಕೋಣ Hlā.; ವಾದ್ಯಕೋಣ, ದಣ್ಡ Nn. 127). ವಾದ್ಯಮಂ ಬಾಜಿಸುವ ಕುಡುಹು (ಕೋಣ Mr. 80). ಪಾತ್ರವಾಪೆ ವಾದಕಂ ಬಾಜಿಸಿದಂ (Śmd. 296).

**ಬಾಜು bāju.** (= ಬಾದಿ 1). a side; any part of the body opposed to any other part; verge, border (ಪಕ್ಕ Cb.; My.; Br.; Mhr., H. ಬಾಜೂ); party, faction; a patron, helper (Mhr., H.). 2, Tbh. of ಬಾಹು. — ಬಾಜು ಆಗು. to go to one side or aside (My.).

**ಬಾಜುಬನ್ದ bāju-banda.** = ಬಾಜಿಬನ್ದ, ಬಾಜೂಬನ್ದ, ಬಾಜೂಬನ್ದು. a bracelet worn on the upper arm (ಅಂಗದ, ಕೇಯೂರ, ಬಾಹುಭೂಷಣ G.).

**ಬಾಜೂಬನ್ದ bājū-banda.** = ಬಾಜುಬನ್ದ. (ಕೇಯೂರ Cb.).

**ಬಾಜೂಬನ್ದು bājū-bandu.** = ಬಾಜೂಬನ್ದ. (ಕೇಯೂರ, ಅಂಗದ Śi. 220).

**ಬಾಜೆ bāje.** = ಬಾಜಾ. instrumental music. (My.).

**ಬಾಜೇ bājē.** miscellaneous (Br., H.). — ಬಾಜೇಬಾಬು, a miscellaneous head in accounts (My., Br., H.).

**ಬಾಂಚೋತು bāñcōtu.** incest committed with one's elder sister; a man who commits that crime; an abusive term. (My.; H.).

**ಬಾಟೆ bāṭe.** a road (My.; Br., H.; Sk. ವಾಟ). see ರಾಜ-.

***ಬಾಡ bāḍa.** 1. = ಬಾಡು. ಅಗ್ಗದ ಬಾಡಂಗಳನಾಯ್ದು ಕೊಟ್ಟು Pb. 2, 53; Vr. 185, 12.

**ಬಾಡ bāḍa.** 2. ಬಾಡಂ. Tbh. of ವಾಢ. much, further (ಅತ್ಯರ್ಥ Nr.; ಸೋಡಂ, ಪಿರಿದುಂ Śmd. 393; ಪಿರಿದು, ಸೋಡಂ, ಉಣ್ಣವಳಿಯದು Śind. II); very well, indeed, yes, surely (ಪ್ರತಿಜ್ಞೆ Nr.). 2, in vain, causelessly (ಸೋಡಂ, ಸುಮ್ಮನೆ Ct. I, 14; ಸೋಡಂ, ಬಱುದು Ct. II, 22; ಸೋಡಂ, ಉಣ್ಣವಳಿಯದು, ಬಱುದು Kk. 89; ಸೋಡಂ, ಬಱುದು Śmd. 110 Mdb. MS. and another one; *cf.* ವಾಯ 1; Mhr. ವಾಡ, room, vacancy: leisure).

**ಬಾಡಗ bāḍaga.** Tbh. of ವಾಟಿಕ. a gardener (Ct. II, 109).

**ಬಾಡಗೆ bāḍagē.** = ಬಾಡಿಗೆ. Tbh. of ಭಾಟಕ. hire; rent; fare (ಭಾಟಕ, ಅನಕ್ರಯ Hlā.; Tu.; T., M. ವಾಡಗ್ಯೆ, ವಾಡಗೆ; Te. ಬಾಡಿಗೆ). — ಬಾಡಗೆಯ ದಾಸಯ್ಯ. N. (Bp. 58, 5).

**ಬಾಡಬ bāḍaba.** = ಬಾಡವ, ವಾಡವ, a Brāhmaṇa, etc. (Bp. 55, 37; 56, 30).

**ಬಾಡಬಾಗ್ನಿ bāḍabāgni.** = ವಾಡವಾಗ್ನಿ. a submarine fire. (My.).

**ಬಾಡಬಾನಲ bāḍabānala.** = ಬಾಡಬಾಗ್ನಿ. (My.).

**ಬಾಡಬೇಯ bāḍabēya.** = ವಾಡವೇಯ. a bull, an ox. (ಎತ್ತು Mr. 178).

**ಬಾಡವ bāḍava.** = ಬಾಡಬ, etc. (ಶುಚಿ, ಬ್ರಾಹ್ಮಣ Nn 18; ಬ್ರಾಹ್ಮಣ Mr. 248).

**ಬಾಡಿಗೆ bāḍige.** = ಬಾಡಗೆ. (My.; B. 4, 160). ಗುಡುಸಲಗಳನ್ನು ಕಟ್ಟಿಸಿ....ಹೆಚ್ಚಿಗೆ ಬಾಡಿಗೆಯ ತಕ್ಕೊಳ್ಳದೆ (B. 5, 204). see ಎತ್ತು ಬಾಡಿಗೆ. — ಬಾಡಿಗೆಗೆ ಕೊಡು. to hire out (My.). — ಬಾಡಿಗೆಯವ. -ಅವ. a man who has hired or tenanted (My.). — ಬಾಡಿಗೆ ಯೆಪ್ಪು. -ಎತ್ತು. a hired or (My.). — ಬಾಡಿಗೇ ಕುದುರೆ. a hired horse (ಸ್ಥೌರಿ G.). — ಬಾಡಿಗೇ ಬಣ್ಡಿ. a hired cart (B. 3, 77). — ಬಾಡಿಗೇ ಮನೆ. a rented house. ಬಾಡಿಗೇ ಮನೆ, ಕೂಡಿಕೇ ನಣ್ಣರು (Prv.).

**ಬಾಡಿಗೆದಾರ bāḍige-dāra.** a man who hires out, as cattle, houses (My.; B. 5, 122).

**ಬಾಡಿಸು bāḍisu.** 1. (= ಬಾಯ್ ಆಡಿಸು). to eat any pungent food to excite drinking or appetite. ಕುಡಿವುತ್ತ ಬಾಡಿಸುವದು (ಉಪದಂಶ, ಅವದಂಶ, ಚಕ್ಷಣ Hlā.). ಬಾಡ ಬಾಡಿಸುತ ಕಳ್ಳುಡಿವುದು (ಅವದಂಶ, ಉಪದಂಶ Mr. 221). ಮದ್ಯಪಾನ ಮಾಡುವಾಗ್ಯೆ ಬಾಡಿಸಿಕೊಮ್ಬುವ ಮಾಂಸ ಮೊದಲಾದವು, ಭೋಜನದಲ್ಲಿ ಬಾಡಿಸಿಕೊಮ್ಬುವ ಉಪ್ಪಿನ ಕಾಯಿ ಮೊದಲಾದವುಗಳು, ನಂಚಿ ಕೊಳ್ಳ ತಕ್ಕದು (ಉಪದಂಶ, etc. Si. 347). ಹಳವ ಮುನ್ನಾದ ಬಾಡಿಸಿಕೊಳ್ಳುವ ಪದಾರ್ಥ (ನಿಷ್ಠಾನ); ಬಾಡಿಸಿ ಕೊಳ್ಳುವ ಪದಾರ್ಥ (ವ್ಯಂಜನ, ಉಪ್ಪಿನ ಕಾಯಿ, ಕೋಸಮ್ಬರಿ G.).

**ಬಾಡಿಸು bāḍisu.** 2. to cause to fade (My.); to scorch or singe by fire, as slices of dried flesh or leaves (My.). ಸುಡುವದೂ ಬಾಡಿಸುವದೂ (ಓಷ, ಪ್ಲೋಷ Si. 389).

**ಬಾಡು bāḍu.** 1. to wither, to fade, as flowers; to die away, as shrubs, etc.; to grow dry, as wounds; to grow weary or languid; to become weak or feeble; to pine away, to lose colour; to be dispirited, downcast, or sad (ಮ್ಲಾನ Śmd. Dh.; Śm. 93; ಕನ್ದು G.; My.; Tu., T., M. ವಾಡು; T. ವದಂಗು, to wither, fade away, grow dried, scorched, or parched; Te. ವಡಲು, see ಬಱಲ್ 1; Mhr. ಬಾವಣೇಂ, ವಾಳಣೇಂ). [ಬಾಡಿ ಪಾಡಱುದು ಬಱಲ್ದು ಜೋಲ್ದಿರವು Pb. 4, 66; Ap. 6, 40]. ಬಾಡಿದ ಹೂ ನಾಡಿನವರಿಗೆ ಯಾಕೆ? (Prv.). see Cpr. 2, 20; 4, 85; 8, 99; Bp. 54, 81; Rśv. 5, 39. 40; 9, 28; J. 9, 13; 11, 37; 15, 18; 19, 30. 32; C. Bp. 4, 7; B. 3, 7.

**ಬಾಡು bāḍu.** 2. flesh (ಮಾಂಸ Śmd. Dh.; Śm. 93; Bhn. 20; ಬಿಕ್ಕು, ಅಡಗು Śm. 32; My.; see Mr. 221 s. ಬಾಡಿಸು 1; ಸುಡು-). [ಬೆಣ್ಣೆಗಾಸಿದಾಮೋದ ಸುಗನ್ಧ ಪರಿಮಳಂ ನಾರ್ಪ ತುಪ್ಪಮುಂ ಪಲವುಂ ತೆಱದ ಬಾಡುಗಳುಂ Vr. 78, 16].

**ಬಾಡು bāḍu.** 3. withering, etc. — ಬಾಡುಮೋಱೆ. a downcast face (Bh. 3, 10, 38).

**ಬಾಡು bāḍu.** Tbh. of ವಾಟಿ. a garden, etc. (ಶಾಕಶಾಕಟ, etc., ಕಾಯ ತೋಣ್ಟ Hlā.).

**ಬಾಣ bāṇa.** = ಬಾನ್ 3, etc. the sky, etc. (My.).

**ಬಾಣ bāṇa.** = ವಾಣ. grass (ಪುಲ್ Nn. 7, = ಬಾಳ 1?); a shaft made of a reed, *an arrow* (ಅಮ್ಬು Nn. 5. 35; ಶರ, ಅಮ್ಬು 7); — a rocket (My.; Te.; T. ಪಾಣ, M. ವಾಣ). [ಧನು ಕಾಯಂಗಿಕ್ಷುದಣ್ಡಂ ಪಜಯಿಗೆ ಮಕರಂ ಬಾಣ ಸಂಘಾತಮಚ್ಚಂ ನನೆಯೆಮ್ಬೀ ಚಿಹ್ನಮಿಲ್ಲೆಮ್ಬ ನಿತೆ ಮನಸಿಜಾಕಾರಂಗೆ Ap. 3, 91]. 2, the number 5 (Ch.; ಸಂಖ್ಯೆ, ಗಣನಾಭೇದ 7, see ಪಂಚಬಾಣ). 3, *N. of an asura*, a sun of Bali (ದೈತ್ಯ, ರಾಕ್ಷಸಭೇದ 7; Bp. 26, 50. 52; 54, 69; J. 7, 40). 4, N. of an author (Bp. 1, 13). 5, a kind of raiment (ನಿವಸನ, ವಸ್ತ್ರಭೇದ 7). 6, *a blue-flowering Barleria* (ಗೋರಟೆ 7; Mr. 505). 7, alone, solitary (= ಕೇವಲ). ಬಾಣವಿದ್ದರೂ ತ್ರಾಣವಿರಬೇಕು. — ಬಾಣವಿಲ್ಲವೆನ್ನು, ಗೋಣ ಕೊಯ್ಯಿವರೆ ಆದೀತೇ? (Prv.). — ಬಾಣ ಎಚೆ. to shoot an arrow (G. 86). — ಬಾಣ ಏಱಿಸು. to put the arrow on the bow (G. 251. 252). — ಬಾಣ ಬಿಡು. — ಬಾಣ ಎಚೆ. ಬಿಟ್ಟ ಬಾಣ (ನಿರಸ್ತ G.). — ಬಾಣ ಹೊಡೆ. = ಬಾಣ ಎಚೆ. (G. 86).

**ಬಾಣಗಾಱ bāṇa-gāṟa.** a preparer and exhibiter of fire-works (My.).

**ಬಾಣಗೇಹ bāṇa-gēha.** a quiver (ಶರಧಿ, ಬತ್ತಳಿಕೆ Nn. 11).

**ಬಾಣಜಾತೆ bāṇa-jāte.** Uṣā, the daughter of the asura Bāṇa (J. 25, 21).

**ಬಾಣತಿ bāṇati.** = ಬಾಣತ್ತಿ, ಬಾಣನ್ತಿ. a puerperal woman, a woman recently delivered, a woman just brought to bed, a lying-in woman (ಜಾತಾಪತ್ಯೆ, ಪ್ರಜಾತೆ, ಪ್ರಸೂತೆ, ಪ್ರಸೂತಿಕೆ Nr.; ಪ್ರಜಾತೆ, ಪ್ರಸೂತೆ Mr. 308; ಪುಷ್ಪಕ 527; Bp. 53, 12; My.; Te. ಬಾಲಿನ್ತೆ; M. ವಣ್ಣೆ; Mhr. ಬಾಳನ್ತ, ಬಾಳನ್ತೀಣ). ಬಾಣತಿಯ ಕೋಣೆ (ಅರಿಷ್ಟ); ಬಾಣತಿಯ ಮನೆ (ಸೂತಿಕಾಗೃಹ G.).

**ಬಾಣತಿತನ bāṇatitana.** nursing, or attending upon, a lying-in woman (My.; B. 5, 158. 304).

**ಬಾಣತ್ತಿ bāṇatti.** = ಬಾಣತಿ, etc. (Abhā. 2, 106; My.).

**ಬಾಣದಾಯಕ bāṇa-dāyaka.** a servant who hands arrows to a warrior in battle (Bh. 8, 21, 4).

**ಬಾಣಂತಿ bāṇanti.** = ಬಾಣತಿ, etc. (ವಿಜಾತೆ, ಪ್ರಜಾತೆ, ಪ್ರಸೂತೆ Hla.; My.). — ಬಾಣಂತಿಬಾಳ. Cocotrine aloes, given to a woman in child-bed (My.; ಬೋಲ, ಗನ್ಧರಸ, etc., ಬೋಳ Si. 334; Mhr. ಬಾಳಂತಬೋಳ). — ಬಾಣಂತಿಬೋಳ. = ಬಾಣಂತಿಬಾಳ. (My.).

**ಬಾಣಪೀಠ bāṇa-pīṭha.** N. of a pedestal or seat of a liṅga (Bp. 57, 53; *cf.* ಬಾಣಲಿಂಗ).

**ಬಾಣಮುಕ್ತಿ bāṇa-mukti.** *shooting an arrow.*

**ಬಾಣಲಿ bāṇali.** = ಬಾಣಲೆ, ಬಾಣ್ಡ್ಲಿ, ಬಾಳಲಿ, ಬಾಳೈ. (Tbh. of ಭ್ರಾಷ್ಟ್ರ). a frying pan of stone or metal (My.; ಅಮ್ಬರೀಷ, ಭ್ರಾಷ್ಟ್ರ Si. 308; ಋಜೀಷ, ಪಿಷ್ಟಪಚನ 309; Te.; T. ವಾಣಾಯ್).

**ಬಾಣಲಿಗೆ bāṇalige.** (Tbh. of ಭ್ರಾಷ್ಟ್ರಕ). = ಬಾಳಿಗೆ, q. v. a frying pan, etc.

**ಬಾಣಲಿಂಗ bāṇa-liṅga.** N. of a liṅga (Bp. 9, 5; 38, 53; 57, 53; 58, 31; Sk. ವಾಣ-).

**ಬಾಣಲೆ bāṇale.** = ಬಾಣಲಿ, etc. (My.; ಅಂಗಾರಶಕಟಿ Mr. 211; see ಅಡು-).

**ಬಾಣಸ bāṇasa.** = ಬಾಣಸು. (Tbh. of ಮಹಾನಸ). a kitchen; cookery (Bh. 1, 10, 14; C. Bp. 47, 41; J. 2, 61; Te. ಪಾನಸ). ಬಾಣಸದ ಮನೆ (ರಸವತಿ, ಪಾಕಸ್ಥಾನ, ಮಹಾನಸ Nr.; ರಸವತಿ, ಮಹಾನಸ Mr. 196); [cooking. ಬೇಟೆಯನಾಡಿ ತನ್ನ ಮೊಲನ ಅಟ್ಟು ಬಾಣಸವ ಮಾಡಿ Cv. 220]. — ಬಾಣಸದ ಶಿವದೇವ. N. (Bp. 58, 11).

**ಬಾಣಸಿ bāṇasi.** a cook (Bh. 4, 2, 56. 58).

**ಬಾಣಸಿಗ bāṇasiga.** = ವಾಣಸಿಗ. a cook (ಸೂಪಕಾರ, ವಲ್ಲವ, ಆರಾಲಿಕ, ಸೂದ, etc. Nr., Hla., Si. 308; ಸೂದ Nr.; ಅಡಬಳ Śmd. II, Kk. 36, Śm. 45; ಉಣಬಡಿಗ Ct. I, 5; ಅಡಿಗೆಯವ Bhn. 53; T. ಪಾನಜೆಯು, Te. ಪಾನಸೀಡು). [ತನ್ನ ಬಾಣಸಿಗನಾಗಿರ್ದ ವಲ್ಲಲನಂ ಕರೆದು Pb. 8, 57 va.]. see Śmd. 233; Bp. 47, 34; 59, 29; J. 2, 60. ಬಾಣಸಿಗನಾದರೆ ಹುಣಿಸೆಯಿಲ್ಲದ ಅಟ್ಟಾನೇ? (Prv.).

**ಬಾಣಸಿಗಿತ್ತಿ bāṇasiga-itti.** a female cook (Bp. 9, 40).

**ಬಾಣಸು bāṇasu.** = ಬಾಣಸ. ಬಾಣಸಿನ ಮನೆ (ಪಾಕಸ್ಥಾನ, ರಸವತಿ, ಮಹಾನಸ Hla.; Bh. 4, 2, 54). [ನಿನ್ನನಾಳ್ವೆನೆನ್ದು ಬಾಣಸಿನ ಕರಣಕ್ಕೆ ನಿರೂಪಣಂ ಗೆಯ್ದು Pb. 8, 54 va.]. — ಬಾಣಸುಗೆಯ್. to cook (Abh. P. 10, 136; 13, 28. 131). — ಬಾಣಸುವೆಗ್ಗಡೆ. -ಪೆಗ್ಗಡೆ. a kitchen-master (ಪೌರೋಗವ, ಸೂದಾಧ್ಯಕ್ಷ Hla.).

**ಬಾಣಹರ bāṇa-hara.** Viṣṇu or Kṛiṣṇa (Mr. 18).

**ಬಾಣಾರಿ bāṇa-ari.** = ಬಾಣಹರ. (My.).

**ಬಾಣಾಶ್ರಯ bāṇa-āśraya.** *a quiver.*

**ಬಾಣಾಸನ bāṇa-āsana.** arrow-discharger: *a bow* (Cpr. 5, 56); — a bow-string.

**ಬಾಣಾಸುರ bāṇa-asura.** = ಬಾಣ No. 3. N. of an asura. (My.).

**ಬಾಣಿ bāṇi.** = ವಾಣಿ 1. sound, speech, etc. (ವಾಣಿ, ಸರಸತಿ, etc. Kk. 9).

**ಬಾಣೆ bāṇe.** *a blue-flowering Barleria* (see ಬಾಣ No 6).

**ಬಾಣೋಚ್ಛಿಷ್ಟ bāṇa-ucchiṣṭa.** orts of the poet Bāṇa (who is said to have used all words in his works and thus to have made, so-to-say, orts of them, Bp. 1, 13).

**ಬಾಣ್ಡು bāṇḍu.** a "bond" (My.). 2, a "band" of musicians and their music (My.).

**ಬಾಣ್ಡ್ಲಿ bāṇḍli.** = ಬಾಣಲಿ, etc. (My.).

**ಬಾತ bāta.** idle talk (Mhr., H.).

**ಬಾತಮಿ bātami.** intelligence, news (My.; Mhr., H.). ಬಾತಮಿ ಹೇಳುವವ (ಸೂಚಕ Cb.).

**ಬಾತಮಿದಾರ bātami-dāra.** an intelligencer (My.; Mhr.); a spy (Mhr.; ಅಪಸರ್ಪ, ಚರ, ಚಾರ, etc. Si. 260).

**ಬಾತಾಖಾನಿ bātākhāni.** an idle talker, a loquacious man (My.; Br.).

**ಬಾತಾಳ bātāḷa.** the Poon-tree, Sterculia foetida Lin. (St. & Pl.).

**ಬಾತು bātu. 1.** = ಬಾದು. P. p. of ಬಾ 2 & ಬಾಯು, q. v.

**ಬಾತು bātu. 2.** = ಬಾರ್ತು. a p. p. of ಬಾರ್ 4. ಬಾತುದು (ಗೂನ, ಹನ್ನ Nr.),

**ಬಾತು bātu.** = ಬಾತೆ. a duck (My.; Br.; M. ಬಾತ್ತು; Port, pato; Arabic baṭ). — ಬಾತುಕೋಳಿ. = ಬಾತು. (My.; ಕಾರಣ್ಡ, ಕಾರಣ್ಡವ G.).

**ಬಾತೆ bāte.** = ಬಾತು. (ಕೋಟಿ Bhn. 20).

**ಬಾದಣ bādaṇa.** = ಬಾದವಣ. Tbh. of ವಾತಾಯನ. an air passage, a window (ವಾತಾಯನ, ಗವಾಕ್ಷ Nr.; Cpr. 8, 44 va.; Rām. 6, 30, 16, a hole). [ನೃಪತಿಯ ಪ್ರಾಸಾದದ ಶಿಖರದ ಮಧ್ಯ ಪ್ರದೇಶದೊಳ್ ಬಾದಣವನ್ನಿರೆ ಛಿದ್ರಂ ಮಾಡಿ Vr. 186, 14].

**ಬಾದರ bādara.** (fr. ಬದರ). made of cotton; *cotton-cloth; the cotton-plant* (ಪಿಚವ್ಯ, ಕಾರ್ಪಾಸ, ಹತ್ತಿ Mr. 128); — silk.

**ಬಾದರಾಯಣ bādarāyaṇa.** N. of a ṛiṣi: Vyāsa (ಕೃಷ್ಣ, ವೇದವ್ಯಾಸ Nn. 47; Bp. 54, 32; Bh. 1, 10, 1; J. 2 sum.; 2, 36).

**ಬಾದವಣ bādavaṇa.** = ಬಾದಣ. (ವಾತಾಯನ, ಗವಾಕ್ಷ, ಜಾಲಕ, etc. Hla.).

**ಬಾದಶಹ bādaśaha.** = ಬಾದಶಾಹ. (My.; B, 4, 8. 146).

**ಬಾದಶಾಹ bādaśāha.** a king, used only of the Mahammadan or of foreign kings or emperors (My.; Mhr., H. ಬಾದಶಾಹಾ; *cf.* ಪಾಚ್ಛ).

**ಬಾದಾಮ bādāma.** = ಬಾದಾಮು the almond-tree, Amygdalus communis and amara; an almond (Mhr., H.). ಬಾದಾಮದ ಗಿಡ (ಮಧುರ Cb.).

**ಬಾದಾಮಿ bādāmi.** = ಬಾದಾವಿ. relating to almonds (Mhr.); — an almond (My.; T. ವಾದುಮ್ಬು). — ಬಾದಾಮಿಮರ. the Indian almond-tree, Terminalia catappa Lin. (St. & Pl.). — ಬಾದಾಮಿಯೆಣ್ಣೆ. -ಎಣ್ಣೆ. almond-oil (My.).

**ಬಾದಾಮು bādāmu.** = ಬಾದಾಮ. (My.; Br.).

**ಬಾದಾವಿ bādāvi.** = ಬಾದಾಮಿ. (B. 3, 19. 20). — ಬಾದಾವಿಗಿಡ. the almond-tree (B. 3, 19. 20).

**ಬಾದಿ bādi. 1.** (= ಬಾಜು). a patron, a helper. ಬಾದಿಯಿಲ್ಲದ ಮನುಷ್ಯ ಬೂದೀ ಸಮಾನ (Prv.).

**ಬಾದಿ bādi. 2.** weight, load (My.; see Prvs. s. ಹೆಣ 1).

**ಬಾದು bādu.** = ಬಾತು 1. P. p. of ಬಾ 2.

**ಬಾದು bādu. 1.** Tbh. of ವಾದ. speaking, etc. (Śmd. 364 Mdb.; Te. ವಾದು). [ಬಾದೇಂ ಮುನೀಯ ಕರ್ಮಫಳೋದಿತ ಸನ್ತಾಪರೂಪ ಪಾಪಕಳಾಪ Pb. 6, 13].

**ಬಾದು bādu. 2.** deducted (from a number, list, etc.); deduction (My.; Mhr., H. ಬಾದ).

***ಬಾದುಬ್ಬೆ bādubbe.** a village goddess? ಬಾದುಬ್ಬೆಯ ಪರ್ವಮುಂ ಪಗರಣದಾಟಪಾಟಮುಮಾದುವು Vr. 118, 21.

***ಬಾದುಮೆ bādume.** a doll, statue. ಗೀಜಗನ ಗೂಡು, ಕೋಡಗದ ಣಲ ಸಂಚ ಬಾದುಮೆಯ ಮದುವೆ ಬಾವುಲಬಿದ್ದಿನನ್ತೆ Bv. 634.

**ಬಾಧ್ಯ bādya.** (a formation fr. ಬನ್ಧು and ಬಾನ್ಧವ). a man who is connected or related: a relative, a relation (My., Te.). ಅವನು ನನಗೆ ಬಾಧ್ಯನು (My.). 2, a man who has a right or claim to (My.; Te.; T. ಪಾತ್ತಿರ್ಯ). ಈ ಮನೆಗೆ ಅವನು ಬಾಧ್ಯನು (My.);

